ಹಳೆಗನ್ನಡ ಕಾವ್ಯಮಾಲಾ : ೨

# ದಶಭಕ್ತಿ

( ಪಂಚಸ್ತೋತ್ರ ತತ್ವಾರ್ಥ ಸೂತ್ರ ಸಹ )



ಸಂಪಾದಕರು :

ಮಿರ್ಜಿ ಅಣ್ಣಾರಾಯರು



ಮುದ್ರಕರು:

[illegible]

[illegible]



ಪ್ರಕಾಶಕರು :

[illegible]

[illegible]

[illegible]

ಶಾಂತಿ ಸೇವಾಸದನ ಸೇಡಬಾಳ

ಅಕ್ಟೋಬರ ೧೯೪೭ Rs. 3-0-0

## ಮಹಾವರು ಮುನಿಗಳು—ಜಿನಸಮಯ ದೀಪಕರು.



ಪರಿಶಿಷ್ಟ:—ಕರ್ಮದಹನಮಂತ್ರ, ಜೈನಾಗಮ ಇತ್ಯಾದಿ

# ಮುನ್ನುಡಿ

ಈ ಗ್ರಂಥ ಪ್ರಕಾಶನಕ್ಕೆ ಮೂವರು ಮುನಿಗಳ ಮನಸ್ಸಿನ ಇಚ್ಛೆ ಕಾರಣವಾಗಿದೆ. ( ಅವರ ಚರಿತ್ರೆ ಮುಂದೆ ಸ್ವಲ್ಪದರಲ್ಲಿ ಕೊಟ್ಟಿದೆ. ) ನಮ್ಮ ಜೈನಾಚಾರ್ಯರ ತಪಸ್ಸಿನ ಪ್ರಭಾವ ಏನನ್ನು ಮಾಡಲಿಕ್ಕಿಲ್ಲ! ಅಂದು ಸ್ವಾಮಿ ಸಮಂತಭದ್ರಾಚಾರ್ಯರು 'ಶ್ರಾವಕಾಚಾರ' ವನ್ನು ಸಾರಿ ಭಾರತೀಯರ ಸಮಾಜ ಜೀವನಕ್ಕೇನೇ ತಳಹದಿ ಹಾಕಿ ಕೊಟ್ಟರು. ಆ ಪರಂಪರೆಯಲ್ಲಿ ಬೆಳೆದ ಆಚಾರ್ಯರು ಇಂದು ಸಮಾಜವನ್ನು ಕಟ್ಟಬಹುದು. ಸಮಾಜವನ್ನು ನಿರ್ಮಿಸ ಬಲ್ಲರು. ಅಂಥ ಸೇವೆಯನ್ನು ಸ್ವೀಕರಿಸುವ ಯೋಗವು ಶ್ರಾವಕರನ್ನು ಕೂಡಿದೆ. ಅದನ್ನವರು ಸ್ವೀಕರಿಸುವರೆ ?

ಸ್ವೀಕರಿಸುತ್ತಿರುವರೆಂಬುದಕ್ಕೆ ಈ ಪ್ರಕಾಶನ [illegible] ಆಧಾರ. ಹುಬ್ಬಳ್ಳಿಯ ಸಮಸ್ತ ಶ್ರಾವಕರ ನೆರವು ದೊರೆಯದಿದ್ದರೆ ಈ ಗ್ರಂಥ ಈಗ ಬೆಳಕಿಗೇ ಬರುತ್ತಿರಲಿಲ್ಲ. ಅವರಲ್ಲೂ ನಮ್ಮ ಕಾರ್ಯಗಳನ್ನೆಲ್ಲ ಬದಿಗಿಟ್ಟು ಈ ಕೆಲಸಕ್ಕೇನೇ ನಿಂತ ಶ್ರೀಮಾನ್ ಎಸ್. ಪಿ. ಇಂಡಿ, ಬಿ. ಎ, ಎಲ್. ಎಲ್. ಬಿ. ವಕೀಲ ಅವರಿಗೂ, ಅವರಂತೆ ಶ್ರೀ. ಧರಣಪ್ಪ ಅದಪ್ಪ ಚಿಕ್ಕಣ್ಣವರ ಅವರಿಗೂ ನಮ್ಮ ವಂದನೆಗಳು. ಅವರಂತೆ ಹುಬ್ಬಳ್ಳಿಯ ಮಹಿಳಾ ಸಮಾಜದವರು ನಮಗೆ ನೆರವಾಗಿದ್ದಾರೆ. ಅವರೂ ನಮ್ಮ ಕೃತಜ್ಞತೆಗೆ ಪಾತ್ರರು. ಕೊನೆಗೆ ಗ್ರಂಥ ಪ್ರಕಾಶನಕ್ಕೆ ಅನುವು ಮಾಡಿಕೊಟ್ಟ ಶ್ರೀ. ಬೆಳಗಾಂವಿ ರಾಮಚಂದ್ರರಾಯರು, ಧಾರವಾಡ ಅವರಿಗೂ ಶ್ರೀ. ಚಂದ್ರನಾಥ ಕೆ, ಭಾಂಡೇಕರ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

೨—೧೦—೧೯೪೭ —ಪ್ರಕಾಶಕರು.

# ಮೂವರು ಮುನಿಗಳು—ಜಿನಸಮಯ ದೀಪಕರು

## ಶ್ರೀ. ೧೦೮ ಪಾಯಸಾಗರ ಮಹಾಮುನಿಗಳು

ಗೋಕಾಕದಲ್ಲಿ ಡೋಂಗರೆ ಮನೆತನ ಎಂದಿನಿಂದಲೂ ಧರ್ಮಾಚರಣೆಯಲ್ಲಿ ಹೆಸರಾದುದು. ಆ ಮನೆತನದ ಶ್ರೀ. ರಾಮಚಂದ್ರಪ್ಪ ಈರಪ್ಪ ಡೋಂಗರೆ ಶ್ರೀ. ಶ್ರೀಮತಿದೇವಿ ಈ ದಂಪತಿಗಳ ಹೊಟ್ಟೆಯಲ್ಲಿ ಪೀತಾಂಬರ ಎಂಬ ಬಾಲಕನು ವೀ. ಸ. ೨೪೧೭ ರಲ್ಲಿ ಫಾ. ಶು. ೫ ದಿನ ( ತಾ. ೭--೩-೧೮೯೧ ) ಜನ್ಮವೆತ್ತಿದನು. ಮುಂದೆ ಸ್ವಲ್ಪ ದಿನಗಳಲ್ಲಿಯೇ ತಂದೆ-ತಾಯಿಂದಿರನ್ನು ಕಳೆದುಕೊಂಡು ಪರದೇಶಿಯಾದ ಬಾಲಕ. ಚಿಕ್ಕಂದಿನ ಅಕ್ಕರೆಯಲ್ಲಿ ಬೆಳೆದು ವಯಸ್ಸಿನ ೧೨ನೆಯ ವರ್ಷಕ್ಕೇನೇ ನಾಟಕ ಕಂಪನಿ ಸೇರಿದ. ಅಲ್ಲಿಂದ ಮುಂಬಯಿಗೆ ಹೋಗಿ ಗಿರಣಿಯ ಕೂಲಿಗಳ ಒತ್ತಕ್ಕೆ ದುಡಿದ ಜೀವಿಯಿದು. ಆಗ ಹೇಗೋ ವೈರಾಗ್ಯ ಹುಟ್ಟಿ ಶಾಂತಿಯವರೆಗೂ ದೀಕ್ಷೆ ತಕ್ಕೊಳ್ಳಬೇಕೆಂದು ಅಲೆದಾಡಿ ಬಂದ ತರುಣನಾತ. ಆಗಲೇ ಅಲ್ಲಿ ಇಲ್ಲಿ ಕೆಲ ಗ್ರಂಥಗಳನ್ನು ಓದಿಕೊಂಡಿರಬೇಕು, ಬರುತ್ತಿರುವ ಪರಕು ಮುರಕು ಕನ್ನಡ, ಮರಾಠಿ ಭಾಷೆಗಳಲ್ಲಿ.

ಇಂತಹ ವಿಚಿತ್ರ ಸ್ವಭಾವದ ಚಂಚಲ ವ್ಯಕ್ತಿಯು ಜೀವಿಯಿಂದು ನಮ್ಮೆದುರಿಗೆ ಸ್ವಸ್ತಿ ಶ್ರೀ. ೧೦೮ ಸ್ಯಾದ್ವಾದ ಕೇಸರಿ, ಅಭಿನವ ಸಮಂತಭದ್ರ, ಉಪದೇಶ ರತ್ನಾಕರ ದರ್ಶನಾಸಿಧಿ ಆಚಾರ್ಯ ಶ್ರೀ. ಪಾಯಸಾಗರ ಮುನಿಗಳಾಗಿ ನಿಂತಿದ್ದಾರೆ! ಇದು ಇವರ ತಪಸ್ಸಿನ ಪ್ರಭಾವ. ತ್ಯಾಗದ ದ್ಯೋತಕ. ಕೊಣ್ಣೂರಿಗೆ ಶ್ರೀ. ಮಹಾಚಾರ್ಯ ಚಕ್ರವರ್ತಿ ೧೦೮ ಶ್ರೀ. ಶಾಂತಿಸಾಗರ ಮುನಿಗಳು ಬರಬೇಕೆಂದರೇನು? ೩೫ ವರ್ಷ ವಯಸ್ಸಿನ ಪೀತಾಂಬರ ಕ್ಷುಲ್ಲಕ ದೀಕ್ಷೆ ತಕ್ಕೊಳ್ಳುವದೆಂದರೇನು? ಎಲ್ಲ ನಮಗೆ ಆಕಸ್ಮಿಕ ಘಟನೆಗಳೇ. ಆದರೆ ಆಯಾ ಜೀವಿಗಳ ಅಂತರಂಗ ಪರಿಣಾಮ ಹಿಂದು. ಪೂರ್ವ ಸಂಚಿತ ಕರ್ಮಫಲ ಸಫಲವಾಗುವ ಕಾಲ ಬಂತು. ಮುಂದೆ ಭಾರತದಲ್ಲಿಯ ವಿವಿಧ ಪುಣ್ಯ ಕ್ಷೇತ್ರಗಳ ಸಂದರ್ಶನವಾಯಿತು. ೪೧ನೆಯ ವಯಸ್ಸಿಗೆ ನಿರ್ಗ್ರಂಥ ದೀಕ್ಷೆಯನ್ನು ಸ್ವೀಕರಿಸಿದರು. ಅಂದಿನಿಂದ ಇಂದಿನವರೆಗೆ ಇವರು ಅನೇಕ ಶಾಸ್ತ್ರಗಳನ್ನು ರಚಿಸಿದ್ದಾರೆ. ಅನೇಕ ಪ್ರವಚನಗಳನ್ನು ಕೊಟ್ಟಿದ್ದಾರೆ. ಜಿನಮಂದಿರಗಳ ಜೀರ್ಣೋದ್ಧಾರ ಮಾಡಿದ್ದಾರೆ. ಅಳಿದುಳಿದ ಜೈನ ಧರ್ಮದ ಬೆಳಕನ್ನು ಎಲ್ಲೆಡೆಗೂ ಬೀರುತ್ತಿದ್ದಾರೆ.

## ಸ್ವಸ್ತಿ ಶ್ರೀ. ೧೦೮ ದೇಶಭೂಷಣ ಮುನಿಗಳು

ಚಿಕ್ಕೋಡಿ ತಾಲೂಕಿನಲ್ಲಿ ಕೋಥಳಿ ಎಂಬುದು ಪುಣ್ಯ ಗ್ರಾಮ. ಅಲ್ಲಿಯ ಗೌಡರ ಮನೆತನವು ಧರ್ಮಾಚರಣೆಯಲ್ಲಿ ಹೆಸರಾದುದು. ಆ ಮನೆತನದಲ್ಲಿ ಶ್ರೀ. ಸತ್ಯಗೌಡ ಶ್ರೀಮತಿ ಅಕ್ಕಾವತಿ ಈ ದಂಪತಿಗಳ ಹೊಟ್ಟೆಯಲ್ಲಿ ಬಾಳಗೌಡ ಎಂಬ ಮಗುವು ಜನಿಸಿತು. ಇದೇ ಪುಣ್ಯ ಜೀವವು ಮುಂದೆ ದೇಶಭೂಷಣ ಮುನಿಗಳೆಂದು ಹೆಸರಾಗಿ ಭಾರತದಲ್ಲೆಲ್ಲ ಬೆಳಗತೊಡಗಿತು.

ಇವರ ತಂದೆ-ತಾಯಂದಿರ ವಿಯೋಗವು ಚಿಕ್ಕಂದಿನಲ್ಲಿಯೇ ಆಯಿತು. ಸಲಹಿದ ಅಜ್ಜಿ, ಚಿಕ್ಕಪ್ಪರು ಮರಣವೆ ಹಾದಿ ನರುಹಿಗೋಳ್ಬೇಕೆನ್ನುವಷ್ಟರಲ್ಲಿ ಇವರು ವೈರಾಗ್ಯಪರರಾಗಿ ಸಮ್ಮೇದ ಶಿಖರ ಯಾತ್ರೆಗೆ ಹೊರಟುಬಿಟ್ಟರು. ಆಗಲೇ ಇವರಿಗೆ ಶ್ರೀ. ೧೦೮ ಜಯಕೀರ್ತಿ ನಿರ್ಗ್ರಂಥ ಮುನಿಗಳ ದರ್ಶನವಾದುದು. ಅವರೇ ಇವರ ದೀಕ್ಷಾ ಗುರುಗಳು. ವಯಸ್ಸಿನ ೨೬ನೆಯ ವರ್ಷದಲ್ಲಿ ರಾಯ ಮಹಾದುರ್ಗದಲ್ಲಿ ಐಲ್ಲಕ ದೀಕ್ಷೆಯನ್ನು ಪಡೆದರು. ಮುಂದೆ ಕೇವಲ ೫ ತಿಂಗಳಲ್ಲಿಯೇ ನಿರ್ವಾಣ ದೀಕ್ಷೆಯನ್ನೂ ಹೊಂದಿದರು. ಆ ಮೇಲೆ ಪ್ರಾಂತ-ಪ್ರಾಂತಗಳಲ್ಲಿ ಸಂಚರಿಸಿ ಧರ್ಮ ಪ್ರಭಾವನೆ ಮಾಡುತ್ತಿದ್ದಾರೆ. ಜಿನಧರ್ಮವನ್ನು ಬೆಳೆಸುತ್ತಿದ್ದಾರೆ.

## ಸ್ವಸ್ತಿ ಶ್ರೀ. ೧೦೫ ಅತಿಬಲ ಮಹಾರಾಜರು

ನವಿಲೂರು ಧಾರವಾಡ ಜಿಲ್ಲೆಯಲ್ಲಿ ಹೆಸರಿಗೆ ತಕ್ಕಂಥ ಸುಂದರ ಊರು ಅಲ್ಲಿ ಚಿವಟೆ ಮನೆತನ ಹೆಸರಾದುದು. ಆ ಮನೆತನದ ಶ್ರೀ. ಗಂಗಪ್ಪ ಶ್ರೀಮತಿ ಬಾಳವ್ವ ಈ ದಂಪತಿಗಳಲ್ಲಿ ಹಿರಿಯ ಮಗನಾಗಿ ರಾಘಪ್ಪನವರು ಜನಿಸಿದರು. ಈ ರಾಘಪ್ಪನವರು ಹುಟ್ಟಾ ಸಂಸಾರದಲ್ಲಿ ವಿರಾಗಿಗಳು. ತಮ್ಮ ಸೌಭಾಗ್ಯವತಿಯಾದ ಅಮ್ಮವ್ವನನ್ನು ಕೂಡಿಕೊಂಡು ಹಲವು ತೀರ್ಥದರ್ಶನ ಮಾಡಿದರು. ಅನೇಕ ಮುನಿಸಂಘಗಳಿಗೆ ಸೇವೆ ಸಲ್ಲಿಸಿದರು. ಅದರಂತೆ ಬಡ ಜನರಿಗೆ ಬರಗಾಲದಲ್ಲಿ ಅನ್ನ ದಾನವನ್ನೂ ಊರಲ್ಲಿಯ ಜಿನಮಂದಿರಕ್ಕೆ ಧನಸಹಾಯವನ್ನೂ ನೀಡುತ್ತ ಬಂದರು.

ಹೀಗೆ ಬೆಳೆಯುತ್ತ ಬಂದ ಇವರಲ್ಲಿಯ ವೈರಾಗ್ಯ ಸುಮ್ಮನೆ ಕೂಡಗೊಡಲಿಲ್ಲ. ಮನೆ ಬಿಡಿಸಿತು. ಮುನಿಸಂಘ ಸೇರಿಸಿಬಿಟ್ಟಿತು. ಸ್ವಸ್ತಿ ಶ್ರೀ. ೧೦೫ ಶಿವಭೂತಿ ಹಾಗೂ ಸುಜ್ಞಾನಬಲರ ಹತ್ತಿರ ಅಭ್ಯಾಸ ಮಾಡಿದರು. ಇದೂ ಶ್ರೀ. ೧೦೮ ಪಾಯಸಾಗರ ಮಹಾ ಮುನಿಗಳ ಆಜ್ಞೆಯಂತೆ. ಮೇಲೆ ಶ್ರೀ. ೧೦೮ ದೇಶಭೂಷಣ ಮುನಿಗಳ ಕೃಪಾಛತ್ರ ಬೇರೆ. ಹೀಗೆ ಈ ದಂಪತಿಗಳ ಅಂತರಂಗ ಪರಿಶುದ್ಧವಾಯಿತು. ಮುನಿದೀಕ್ಷೆಗೆ ಸಿದ್ಧಗೊಂಡಿತು. ಅಂತಲೆ! ತಾ. ೯-೧೦-೫೬ನೆಯ ದಿನ ಶ್ರೀ. ೧೦೮ ದೇಶಭೂಷಣ ಮಹಾರಾಜರು ಇವರಿಬ್ಬರಿಗೂ ದೀಕ್ಷೆ ಕೊಟ್ಟರು. ಅಂದಿನಿಂದ ರಾಘಪ್ಪನವರು ಶ್ರೀ. ೧೦೫ ಅತಿಬಲ ಮಹಾರಾಜರೆಂದೂ ಅಮ್ಮವ್ವನವರು ಶ್ರೀ. ೧೦೫ ಸುವ್ರತಾದೇವಿಯವರೆಂದೂ ಹೆಸರಾದರು. ತಪಶ್ಚರ್ಯದಲ್ಲಿ ನಿರತರಾದರು.

ಈ ಮೂವರು ಮುನಿಗಳ ನೇತೃತ್ವದಲ್ಲಿಯೇ '**ದಶಭಕ್ತಿ**' ಪ್ರಕಟವಾಗುತ್ತಿರುವುದು.

---

# ಭೂಮಿಕೆ

ಈ ಸ್ವಾಧ್ಯಾಯ ಗ್ರಂಥದಲ್ಲಿ ಮುನಿಗಳಿಗೂ ಶ್ರಾವಕರಿಗೂ ಉಪಯುಕ್ತವಾದ ಪಂಚಸ್ತೋತ್ರ, ದಶಭಕ್ತಿ, ತತ್ತ್ವಾರ್ಥಸೂತ್ರ ಮೊದಲಾದವುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಇವುಗಳನ್ನೆಲ್ಲ ರಚಿಸಿದ ಆಚಾರ್ಯರು ಮಹಾತ್ಯಾಗಿಗಳೂ ಮಹಾಯೋಗಿಗಳೂ ಆಗಿದ್ದಾರೆ. ಅವರ ಆಧ್ಯಾತ್ಮಿಕ ತಪಸ್ಸು ಸಾಹಿತ್ಯರೂಪದಲ್ಲಿ ಅವ ತರಸಿದ್ದನ್ನು ನಾವು ಇಲ್ಲಿ ಕಾಣಬಹುದು. ಅವರ ಚಾರಿತ್ರಿಕಾಂತ ಗಳೂ ನಮ್ಮ ಸಾಧ್ಯಾಯ ಸಾಧನೆಯಲ್ಲಿ ಸಹಾಯಕವಾಗುವಂತಿವೆ. ಅದಕ್ಕಾಗಿ ಅವುಗಳನ್ನು ಅರಿತುಕೊಂಡು ವಿಷಯಕ್ಕೆ ಸಾಗೋಣ.

## ಭಗವಜ್ಜಿನಸೇನಾಚಾರ್ಯರು.

ಇವರು ಕನ್ನಡಿಗರು. ಕನ್ನಡ ಅರಸನಾದ ನೃಪತುಂಗನ ಗುರುಗಳು. ಒಂಭತ್ತನೆಯ ಶತಮಾನದಲ್ಲಿ ಬಾಳಿದರು, ಬೆಳಗಿದರು. ಇವರ ತಂದೆ ತಾಯಂದಿರ ಹೆಸರು ದೊರೆಯುವದಿಲ್ಲ. ಸನ್ಯಸನ ಸ್ವೀಕರಿಸಿದ ನಂತರ ಜೈನಾಚಾರ್ಯರು ಅದನ್ನು ಹೇಳುವ ಗೊಡ ವೆಗೆ ಹೋಗುವದಿಲ್ಲ ಅವರ ಗುರು ಪರಂಪರೆಯೇ ಅವರ ವಂಶ ವಿದ್ವಂತೆ. ಶ್ರೀ. ಸಮಂತಭದ್ರಾಚಾರ್ಯರ ಶಿಷ್ಯಕೋಟಿ ಯೊಳ ಗಿನವರು ಇವರೊಬ್ಬರು. ಇವರ ಗುರುಗಳು ವೀರಸೇನಾಚಾ ರ್ಯರು. ವೀರಸೇನರು ಬಪ್ಪದೇವ ಗುರುಕೃತ "ವ್ಯಾಖ್ಯಾ ಪ್ರಜ್ಞ ಪ್ತಿ"ಯ ಮೊದಲ ಆರು ಖಂಡ (ಕರ್ಮಪ್ರಾಭೃತ) ಗಳ ಮೇಲೆ ಎಪ್ಪತ್ತೆರಡು ಸಾವಿರ ಶ್ಲೋಕಸಂಖ್ಯೆಯುಳ್ಳ ಧವಲವೆಂಬ ಹೆಸರಿನ ಟೀಕಾಗ್ರಂಥ ವೊಂದನ್ನು ಬರೆದು ಮುಗಿಸಿದರು. ಅನಂತರ ಉಳಿದ ಭಾಗವಾದ "ಕಷಾಯಪ್ರಾಭೃತ"ದ ಮೇಲೆ "ಜಯಧವಲ" ಎಂಬ ಹೆಸರಿನ ಟೀಕೆ ಬರೆಯಲು ಆರಂಭಿಸಿದ್ದರು. ಅದರಲ್ಲಿ ಇಪ್ಪತ್ತು ಸಾವಿರ ಶ್ಲೋಕಗಳಾದ ನಂತರ ಅವರು ಮರಣಹೊಂದಿದರು. ಆ ಮಹಾಗ್ರಂಥದ ಉಳಿದ ಭಾಗವನ್ನು ಶ್ರೀ. ಜಿನಸೇನಾಚಾರ್ಯರು ನಲವತ್ತು ಸಾವಿರ ಪದ್ಯಗಳಲ್ಲಿ ಬರೆದು ಮುಗಿಸಿದರು. ಅನಂತರ ಆದಿಪುರಾಣವನ್ನು ಬರೆದರು. ಇದಕ್ಕೆ ಮಹಾಪುರಾಣವೆಂದೂ ಹೆಸರು. ಇದರಲ್ಲಿ ಆದಿನಾಥ ತೀರ್ಥಂಕರರ ಹಾಗೂ ಭರತ ಚಕ್ರ

ವರ್ತಿಯ ಚರಿತ್ರೆ ಬಹು ಸುಂದರವಾಗಿ ಬರೆದಿದೆ. ಇದರಂತೆ "ಪಾರ್ಶ್ವಾಭ್ಯುದಯ" ಎಂಬ ಇನ್ನೊಂದು ಖಂಡಕಾವ್ಯವನ್ನೂ ಬರೆದಿದ್ದಾರೆ. ಇದಕ್ಕೆ ಸಂಸ್ಕೃತ ಸಾಹಿತ್ಯದಲ್ಲಿ "ಮೇಘದೂತ"ಕ್ಕೆ ಇರುವಷ್ಟು ಮಹತ್ವದ ಸ್ಥಾನವಿದೆ. ಇವು ಇವರ ಉಪಲಬ್ಧ ಗ್ರಂಥಗಳು. ಇವಲ್ಲದೆ ವರ್ಧಮಾನ ಪುರಾಣ, ಪಾರ್ಶ್ವಸ್ತುತಿ, ಪ್ರಸಂಬಂಧ ಇತ್ಯಾದಿ ಗ್ರಂಥಗಳನ್ನೂ ಬರೆದಿರುವರೆಂದು ತಿಳಿಯುತ್ತದೆ. ಆದರೆ ಅವು ಉಪಲಬ್ಧವಿಲ್ಲ. ಇವರು ಕರ್ನಾಟಕ ಮಹಾರಾಷ್ಟ್ರಗಳ ತುಂಬೆಲ್ಲ ವಿಹರಿಸುತ್ತಿದ್ದರು. ಹೆಚ್ಚಾಗಿ ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡದಲ್ಲಿ ಇರುತ್ತಿದ್ದರು. ಆದಿಜಿನನ ಸಹಸ್ರನಾಮ ಸ್ತೋತ್ರವನ್ನು ರಚಿಸಿದ ಮಹಾಕವಿಗಳು ಇವರು.

## ಮಾನತುಂಗಾಚಾರ್ಯರು.

ಇವರು ಕನ್ನಡಿಗರು. ದೇಶಪರ್ಯಟನ ಮಾಡುತ್ತ ಉಜ್ಜಯಿನಿಗೆ ಹೋದರು. ಅಲ್ಲಿ ಭೋಜರಾಜನು ಆಳುತ್ತಿದ್ದನು. ಅವನು ಕಾಳಿದಾಸನ ಮಾತಿನಂತೆ ಮಾನತುಂಗಾಚಾರ್ಯರನ್ನು ವಾದಮಾಡಲು ಸಭೆಗೆ ಕರೆಯಿಸಿದನು. ಆಚಾರ್ಯರು ಸಭೆಗೆ ಹೋಗಲು ನಿರಾಕರಿಸಿದರು. ಆದರಿಂದ ಹಿಡಿದೊಯ್ದರು, ಆಗ ಆಚಾರ್ಯರು ಮೌನಧರಿಸಿದರು. ಇದನ್ನು ಕಂಡು ಅರಸನು ಸಿಟ್ಟಿಗೆದ್ದು ಆಚಾರ್ಯರನ್ನು ಕಾರಾಗ್ರಹದಲ್ಲಿ ಇಟ್ಟನಂತೆ. ಆಗ ಇವರು ಭಕ್ತಾಮರ ಸ್ತೋತ್ರವನ್ನು ರಚಿಸಿದರು. ಇದರಿಂದ ಇವರು ಬಂಧಮುಕ್ತರಾದರು. ಅನಂತರ ಸಭೆಯಲ್ಲಿ ಆಚಾರ್ಯರಭಕ್ತಿಗೆ ಮೆಚ್ಚಿ ಪ್ರತ್ಯಕ್ಷಳಾದ ಚಕ್ರೇಶ್ವರಿಗೂ ಕಾಲಿದಾಸಕವಿಯ ಇಷ್ಟದೇವತೆಯಾದ ಕಾಲಿಕಾದೇವಿಗೂ ವಾದನಡೆದು ಕಾಲಿಕಾದೇವಿ ಸೋತಳಂತೆ. ಆಗ ಭೋಜರಾಜನು ಜೈನದೀಕ್ಷೆಯನ್ನು ಸ್ವೀಕರಿಸಿದನು. ಈ ಆಚಾರ್ಯರ ಶಿಷ್ಯ ಶ್ರೇಷ್ಠನೇ ಧನಂಜಯ ಮಹಾಕವಿಯು.

## ಧನಂಜಯ ಮಹಾಕವಿ.

ಈತನೂ ಭೋಜರಾಜನ ಆಸ್ಥಾನ ಕವಿಯು. ಅದರಂತೆ ಅಮರಸಿಂಹನ ಬಳಗದವರಲ್ಲಿ ಒಬ್ಬನೂ ಅಹುದು. ಇವನ ಸಲುವಾಗಿ

ಒಂದು ಕಥೆಯೂ ಉಂಟು. ಧನಂಜಯನ ತಂಗಿಯನ್ನು ಅಮರ ಸಿಂಹನಿಗೆ ಕೊಟ್ಟಿದ್ದಿತು. ರಾಜನು ಇಬ್ಬರಿಗೂ ಎರಡು ಗ್ರಂಥಗಳನ್ನು ಬರೆಯಲು ಹೇಳಿದ. ಆರುತಿಂಗಳ ಅವಧಿ ಕೊಟ್ಟ. ಈಗ ಅಮರ ಸಿಂಹನ ಹೆಸರಿನಿಂದ ಪ್ರಸಿದ್ಧವಿರುವ "ಅಮರ ಕೋಶ" ವನ್ನೇ ಧನಂಜಯ ಬರೆದಿದ್ದ. ಅದನ್ನು ಅವನ ತಂಗಿ ಅಣ್ಣನಿಗೆ ಗೊತ್ತಿಲ್ಲ ದಂತೆ ಒಯ್ದು ತನ್ನ ಗಂಡನಿಗೆ ಕೊಟ್ಟಳು. ಅದು ಅವನ ಹೆಸರಿ ನಿಂದ ರಾಜಸಭೆಯಲ್ಲಿ ಪ್ರಕಟವಾಯಿತು. ರಾಜನು ಧನಂಜಯ ನನ್ನು ಕರೆಯ ಕಳುಹಿದಾಗ ಮನೆಯಲ್ಲಿ ಗ್ರಂಥವಿರಲಿಲ್ಲ. ರಾಜ್ಯ ಆಸ್ಥಾನಕ್ಕೆ ಹೋಗುವಾಗ ದಾರಿಯಲ್ಲಿ ಎರಡು ನೂರು ಶ್ಲೋಕಗಳಲ್ಲಿ ತಾನು ಬರೆದ ಮಹಾಕೋಶದ ಸಂಗ್ರಹವನ್ನು ಮಾಡಿಕೊಂಡು ಹೋಗಿ ಓದಿತೋರಿಸಿದ. ಅರಸು ಮೆಚ್ಚಿದ. ಅವನ ಪುಟ್ಟ ಕೋಶವೇ "ಧನಂಜಯನಾಮಮಾಲಾ" ಎಂದು ಪ್ರಸಿದ್ಧವಾಯಿತು. ಈತ ಪ್ರಸಿದ್ಧವ್ಯಾಪಾರಿ, ವೈಶ್ಯ. ಈತನು "ವಿಷಾಪಹಾರ" ಸ್ತೋತ್ರವನ್ನು ರಚಿಸಿರುವನು.

## ಕುಂದ ಕುಂದಾಚಾರ್ಯರು.

ಇವರು ಜೈನಾಚಾರ್ಯರಲ್ಲಿ ಬಹು ಪ್ರಸಿದ್ಧರು. ಕ್ರಿ. ಶ. ಪೂರ್ವ ೧ನೆಯ ವರುಷಗಳಲ್ಲಿ ಇವರು ಜನಿಸಿದರು. ದಕ್ಷಿಣಭಾರತದ ಪಿಡಥನಾಡು ದೇಶದಲ್ಲಿ ಕುರುಮರಾಯಿ ಎಂಬೊಂದು ನಗರ, ಅಲ್ಲಿ ಕರಮುಂಡ ನೆಂಬ ವೈಶ್ಯನೊಬ್ಬ, ಆತನ ಹೆಂಡತಿ ಶ್ರೀಮತಿ. ಇವರ ಹೊಟ್ಟೆಯಿಂದ ಕುಂದಕುಂದಾಚಾರ್ಯರು ಜನಿಸಿದರು. ಇವರು ಚಿಕ್ಕಂದಿನಲ್ಲಿಯೇ ಸನ್ಯಾಸ ಸ್ವೀಕರಿಸಿದರು. ಇವರಿಗೆ ಪದ್ಮನಂದಿ, ವಕ್ರಗ್ರೀವ, ಗೃಧ್ರಪಿಂಛ, ಏಲಾಚಾರ್ಯರೆಂದೂ ಹೆಸರುಗಳು. ಇವರು ದ್ರಾವೀಡ ದೇಶದ ವಂದವಾಸಿ ತಾಲೂಕಿಗೆ ಸೇರಿದ ಪೊನ್ನೂರು ಬೆಟ್ಟದಲ್ಲಿ ತಪಸ್ಸು ಮಾಡಿದರು. ಅವರ ಪಾದ ಚಿಹ್ನೆ ಈಗಲೂ ಅಲ್ಲಿದೆ. ಇವರು ದ್ರಾವಿಡ ಭಾಷೆಯಲ್ಲಿ ಉಯದ್ಗ್ರಂಥವೆನಿಸುವ "ತಿರು ಕುರಲ್" ಒಂಬ ಗ್ರಂಥವನ್ನೂ ರಚಿಸಿರುತ್ತಾರೆ. ಅಲ್ಲದೆ ಪಂಚಾಸ್ತಿ ಕಾಯ ಸಮಯಸಾರ, ರಯಣಸಾರ, ನಿಯಮಸಾರ, ಷಟ್ಪ್ರಾಹುಡ,

ದ್ವಾದಶಾನುಪ್ರೇಕ್ಷೆ, ದಶಭಕ್ತಿ ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಇಲ್ಲಿಯ ಪ್ರಾಕೃತ ದಶಭಕ್ತಿಯನ್ನು ರಚಿಸಿದ ಮಹಾತ್ಮರು ಇವರು.

## ಪೂಜ್ಯಪಾದಾಚಾರ್ಯರು.

ಕನ್ನಡ ನಾಡಿನ ಕೊಳ್ಳೇಗಾಲ ಪುರದಲ್ಲಿ ಮಾಧವಭಟ್ಟನೆಂಬೊಬ್ಬ ವಿಪ್ರ ಶ್ರೇಷ್ಠನಿದ್ದನು. ಅವನ ಪತ್ನಿ ಶ್ರೀದೇವಿ. ಇವರ ಹೊಟ್ಟೆಯಿಂದ ಪೂಜ್ಯಪಾದರು ಶಕ ವರುಷ ೪೦೦ರಲ್ಲಿ ಹುಟ್ಟಿದರು. ಇವರಿಗೆ ದೇವನಂದಿ, ಜಿನೇಂದ್ರಬುದ್ಧಿಗಳೆಂಬೂ ಹೆಸರುಗಳು. ಇವರ ಸೋದರ ಮಾವನ ಊರು ಮುನಿಗುಂಡ ಎಂಬ ಹಳ್ಳಿ. ತಪಸ್ಸುಮಾಡಿದುದು ಪದಿನಾಡಿನಲ್ಲಿ. ಇವರು ತರ್ಕ, ವ್ಯಾಕರಣ, ಆಗಮ, ವೈದ್ಯ ಮೊದಲಾದ ವಿದ್ಯೆಗಳಲ್ಲಿ, ಅದ್ವಿತೀಯರಾಗಿದ್ದರು. ಜೈನೇಂದ್ರವೆಂಬ ಸಂಸ್ಕೃತ ವ್ಯಾಕರಣ ಗ್ರಂಥ ಇವರೇ ರಚಿಸಿದರು. "ಕಲ್ಯಾಣ ಕಾರಕ" ವೆಂಬ ವೈದ್ಯ ಗ್ರಂಥವಂತೂ ಇವರ ಹೆಸರನ್ನು ಅಜರಾಮರಗೊಳಿಸಿದೆ. ಅಲ್ಲನೆ ಇವರು ಇನ್ನೂ ಎಷ್ಟೋ ಮಂತ್ರ ತಂತ್ರಾದಿ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಸಂಸ್ಕೃತದಲ್ಲಿ "ದಶಭಕ್ತಿ" ಯನ್ನು ಬರೆದರು.

ಪೂಜ್ಯಪಾದರನ್ನು "ಗಗನ ಗಮನ ಸಾಮರ್ಥ್ಯರ್", "ತಾರ್ಕಿಕ ತಿಳಕರ್" ಎಂದು ಚಾಮುಂಡರಾಯನೂ "ವಿಶ್ವವಿದ್ಯಾಭರಣಂ" "ದೇವಾಂಗನಾರಾಧಿತ ಪದಕಮಳಂ" ಎಂದು ವೃತ್ತವಿಲಾಸನೂ "ಸಕಲೋರ್ವೀನುತ ಪೂಜ್ಯಪಾದ ಮುನಿಪಂ ಕಾರುಣ್ಯ ದುಗ್ಧಾರ್ಣವಂ" ಎಂದು ಪಾರ್ಶ್ವ ಪಂಡಿತನೂ ಸ್ತುತಿಸಿದ್ದಾರೆ.

## ಸಮಂತ ಭದ್ರ.

ಇವರು ಕನ್ನಡನಾಡಿನ ಆಚಾರ್ಯರು. ಮಹಾ ಜೀವಿಗಳು ಭವಿಷತ್ತು ಕಾಲದಲ್ಲಿ ತೀರ್ಥಂಕರರಾಗುವ ದಿವ್ಯ ಆತ್ಮ. ಇವರು ಕ್ರಿ. ಶ. ಎರಡನೇಯ ಶತಮಾನದಲ್ಲಿ ಬಾಳಿದರು. ಮಣುವಕಹಳ್ಳಿಯಲ್ಲಿ ತಪಸ್ಸುಮಾಡಿದರು. ಇವರ ಸಂಸ್ಕೃತ ಪಾಕೃತಗ್ರಂಥಗಳಿಗೆ ವ್ಯಾಖ್ಯಾನಗಳು ದೊರೆತಿವೆಯೆಂದು ಕವಿಚರಿತ್ರೆಕಾರರು ಹೇಳಿದ್ದಾರೆ.

ಅನೇಕ ಸಂಸ್ಕೃತ ಗ್ರಂಥಗಳು ಉಪಲಬ್ಧವಿವೆ. ಅವುಗಳಲ್ಲಿ ರತ್ನಕರಂಡಕ ಅಥವಾ ಶ್ರಾವಕಾಚಾರ, ಹಾಗು ದೇವಾಗಮಸ್ತೋತ್ರ ಇತ್ಯಾದಿಗಳು ಉಪಲಬ್ಧ ಇವೆ. ಇವರು ತತ್ವಾರ್ಥ ಸೂತ್ರಕ್ಕೆ ೯೬೦೦೦ ಶ್ಲೋಕಗಳುಳ್ಳ ಟೀಕೆಯೊಂದನ್ನು ಬರೆದಿದ್ದರೆಂದು ತಿಳಿಯುತ್ತದೆ. ಆ ಗ್ರಂಥ ನಮಗೆ ದೊರೆತಿಲ್ಲ. ಇವರು ಕನ್ನಡದಲ್ಲಿಯೂ ಶ್ರೀ. ವಿಜಯನೆಂಬ ಹೆಸರಿನಿಂದ ವ್ಯಾಕರಣ, ಅಲಂಕಾರ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಗ್ರಂಥವನ್ನು ಬರೆದಿದ್ದಾರೆ. ಮಹಾಪುರಾಣದಲ್ಲಿ ಭಗವಜ್ಜಿನಸೇನಾಚಾರ್ಯರೂ, ಗುಣಭದ್ರಾಚಾರ್ಯರೂ ಇವರನ್ನು ಸ್ತುತಿಸಿರುವರು.

ತತ್ವಾರ್ಥ ಸೂತ್ರ ವ್ಯಾಖ್ಯಾನ ಗಂಧ ಹಸ್ತಿ ಪ್ರವರ್ತಕಃ ।
ಸ್ವಾಮೀ ಸಮಂತ ಭದ್ರೋಽ ಭೂದ್ದೇವಾಗಮನಿದರ್ಶಕಃ॥

ಈ ಗ್ರಂಥವಲ್ಲದೆ ಸ್ವಯಂಭೂಸ್ತೋತ್ರ (ಚತುರ್ವಿಂಶತಿ ತೀರ್ಥಂಕರರಸ್ತುತಿ) ವನ್ನು ರಚಿಸಿದ್ದಾರೆ.

## ಉಮಾಸ್ವಾಮಿ.

ಇವರು ಕ್ರಿಸ್ತಶಕದ ಆರಂಭದಲ್ಲಿ ಇದ್ದರು. ಇವರಿಗೆ ದಿಗಂಬರ ಸಂಪ್ರದಾಯದಲ್ಲಿ ಪದ್ಮನಂದಿ ಆಚಾರ್ಯರೆಂದು ಹೆಸರು. ಆದರೆ ಇವರನ್ನು ದಿಗಂಬರ, ಶ್ವೇತಾಂಬರ ಪಂಥದವರಿಬ್ಬರೂ ಆದರಿಂದ ಕಾಣುತ್ತಾರೆ. ಇವರು ಬರೆದ ತತ್ವಾರ್ಥಸೂತ್ರವು ಜೈನ ದರ್ಶನ ಗ್ರಂಥಗಳಲ್ಲಿ ಬಹಳ ಶ್ರೇಷ್ಠವಾದುದು. ಈ ಗ್ರಂಥದಮೇಲೆ ಸ್ವಾಮಿ ಸಮಂತಭದ್ರರು, "ಗಂಧಹಸ್ತಿ ಮಹಾಭಾಷ್ಯಂ" ಎಂಬ ಟೀಕೆಯನ್ನು ವಿದ್ಯಾನಂದಿ ಆಚಾರ್ಯರು "ತತ್ವಾರ್ಥ ಶ್ಲೋಕ ವಾರ್ತಿಕವನ್ನೂ" ಪೂಜ್ಯಪಾದರು ಸರ್ವಾರ್ಥಸಿದ್ಧಿ, ಎಂಬುವನ್ನು ಅಕಲಂಕ ದೇವರು "ತತ್ವಾರ್ಥ ವಾರ್ತಿಕಾಲಂಕಾರ" ಎಂಬುವನ್ನು ಶ್ರುತಸಾಗರರು ಶ್ರುತಸಾಗರ ಟೀಕೆಯನ್ನು ಬರೆದಿದ್ದಾರೆ. ಇನ್ನೂ ಹಲವರು ಹಲವು ರೀತಿಯಲ್ಲಿ ತತ್ವಾರ್ಥದ ಮೇಲೆ ಗ್ರಂಥನಿರ್ಮಾಣ ಮಾಡಿದ್ದಾರೆ. ಇಷ್ಟು ಶ್ರೇಷ್ಠವಾಗಿದೆ ಇವರ ತತ್ವಾರ್ಥಸೂತ್ರ. ಈ ಶಾಸ್ತ್ರೀಯ ಗ್ರಂಥವನ್ನು ಇವರು ಶಿವಕುಮಾರ ರಾಜನಿಗೆ ಉಪದೇಶಿಸಲಿಕ್ಕೆಂದು ವಿಸ್ತರಿಸಿದರು.

# ಸಾರಸಂಗ್ರಹ

## ಸರಸ್ವತೀ ಸ್ತೋತ್ರಂ

ಇದರಲ್ಲಿ ಆಚಾರ್ಯರು ಮೊದಲು ವಾಗ್ದೇವಿಯ ರೂಪ ಗುಣಗಳನ್ನು ಸವಿಸ್ತಾರವಾಗಿ ವರ್ಣಿಸಿದ್ದಾರೆ. ಧರಣೇಂದ್ರ, ಗರುಡಾಧಿಪ ಕಿನ್ನರೇಂದ್ರ, ವಿದ್ಯಾಧರೇಂದ್ರ, ಮೊದಲಾದವರಿಂದ ವಂದಿಸಿಕೊಳ್ಳುವಂತಹ ಪೂಜ್ಯಳೆಂದೂ ಹೇಳಿದ್ದಾರೆ. ಅವಳಿಗೆ ಭಾರತಿ, ಸರಸ್ವತಿ, ಶಾರದಾದೇವಿ, ಹಂಸಗಾಮಿನಿ, ವಿದ್ವಾಂಸರ ತಾಯಿ. ವಾಗೀಶ್ವರಿ, ಕುಮಾರಿ, ಬ್ರಹ್ಮಚಾರಿಣಿ, ಜಗನ್ಮಾತಾ, ಬ್ರಾಹ್ಮಿಣಿ, ಬ್ರಹ್ಮಾಣಿ, ವರದಾ, ವಾಣಿ, ಭಾಷಾ, ಶೃತದೇವಿ, ಎಂದು ಮೊದಲಾದವುಗಳು ಹೆಸರುಗಳು. ಜಿನವಾಣಿ ಸ್ವರೂಪಳಾದ ಶಾರದೆಗೆ ಹದಿನಾರು ಅಂಗಗಳು. ಅವಳು ವರವನ್ನು ಕೊಡುವಂತಹಳು. ಇಂತಹ ಸರಸ್ವತೀದೇವಿಗೆ ವಂದಿಸುವೆ. ನನಗೆ ವಿಧ್ಯಾಸಿದ್ಧಿಯಾಗಲಿ.

## ಸುಪ್ರಭಾತ ಸ್ತೋತ್ರಂ

ಇದನ್ನು ಆಚಾರ್ಯರು ಬೆಳಗಿನ ಜಾವದಲ್ಲಿ ಎದ್ದೊಡನೆಯೇ ಇಪ್ಪತ್ತುನಾಲ್ಕು ತೀರ್ಥಂಕರರನ್ನು ಸ್ತುತಿಸಲೆಕ್ಕೆಂದು ರಚಿಸಿದ್ದಾರೆ. ಇದರಲ್ಲಿ ಪ್ರತಿಯೊಬ್ಬ ತೀರ್ಥಂಕರರ ಒಂದೊಂದು ಗುಣಗಳನ್ನು ಬಹು ಸುಂದರವಾಗಿ ಸ್ವಾರಸ್ಯವಾಗಿ ಹೇಳಿದ್ದಾರೆ. 'ಮೋಹ ಮಲ್ಲ ಮದ ಭಂಜನ ಮಲ್ಲಿನಾಥ' ಎನ್ನುವಲ್ಲಿ ಎಂಥ ವಿಶಾಲವಾದ ಭಾವ ತುಂಬಿದೆ ನೋಡಿ !

## ಜಿನಮಂದಿರ ದರ್ಶನ ಸ್ತೋತ್ರಂ

ದೂರದಿಂದ ಜಿನಮಂದಿರವನ್ನು ಕಂಡೊಡನೆಯೇ ಅನ್ನಬೇಕಾದ ಸ್ತೋತ್ರವಿದು. ಇದರಲ್ಲಿ ಜಿನಮಂದಿರದ ವರ್ಣನೆಯು

ಬಹಳ ಸುಂದರವಾಗಿ ಬಂದಿದೆ. ಬಸದಿಯು ಧ್ವಜಗಳಿಂದಲೂ ಸುರಸ್ತ್ರೀಯರ ಗಾನರವದಿಂದಲೂ ಮಹಾಮುನಿವಾಸದಿಂದಲೂ ಕಲಶಚಾಮರಗಳಿಂದಲೂ ಸುಗಂಧಧೂಪದಿಂದಲೂ ಬಿಳಿಯ ಛತ್ರಗಳಿಂದಲೂ ಅಲಂಕೃತವಾಗಿರುವುದೆಂದು ಹೇಳಲಾಗಿದೆ. ಜಿನ ಬಿಂಬಯುಕ್ತವಾದ ಇಂತಹ ಮಂದಿರ ದರ್ಶನವು ಮಂಗಲ ವನ್ನುಂಟು ಮಾಡುವುದು.

## ಜಿನದರ್ಶನ ಸ್ತೋತ್ರಂ

ಇದರಲ್ಲಿ ಜಿನದರ್ಶನದಿಂದ ಮಾನವನಿಗೆ ದೊರಕುವ ಫಲ ವನ್ನು ಹೇಳಲಾಗಿದೆ. ಜಿನ ದರ್ಶನದಿಂದ-ಜನ್ಮ ಸಫಲವಾಗುವುದು. ಮುಕ್ತಿ ದೊರೆಕೊಳ್ಳುವುದು. ಜನನ ಮರಣದ ಕಷ್ಟ ನಷ್ಟವಾಗು ವುದು. ಧರ್ಮವೆಂಬ ತೀರ್ಥದಲ್ಲಿ ಸ್ನಾನ ಮಾಡಿದಂತಾಗುವುದು. ಸಂಸಾರ ಸಾಗರವನ್ನು ಈಸಿ ದಾಟಲಿಕ್ಕೆ ಸಹಕಾರಿಯಾಗುವುದು. ಕರ್ಮ ನಷ್ಟವಾಗುವುದು. ದುರ್ಗತಿ ತೊಲಗುವದು. ಅಜ್ಞಾನ ಹೋಗುವದು. ಜ್ಞಾನೋದಯ ವಾಗುವುದು. ಮಾನವನು ತ್ರಿಲೋಕ ಪೂಜ್ಯಕ್ಕೆ ಯೋಗ್ಯನಾಗುವನು. ಸರ್ವಾರ್ಥಗಳೂ ಸಿದ್ಧಿ ಸುವವು. ಅದರಿಂದ ನಿತ್ಯ ಜಿನನ ದರ್ಶನವು ಪ್ರತಿಯೊಬ್ಬ ಮಾನವ ನಿಗೂ ಅತ್ಯಾವಶ್ಯಕ ವಾದುದು.

## ಜಿನಸಹಸ್ರನಾಮ ಸ್ತೋತ್ರಂ

ಇದರಲ್ಲಿ ಆದಿ ತೀರ್ಥಂಕರರ ಸಾವಿರ ಹೆಸರುಗಳನ್ನು ಹೇಳಲಾ ಗಿದೆ. ಒಂದೊಂದು ಹೆಸರಿನ ಹಿಂದೆಯೂ ಅಪಾರವಾದ ಅರ್ಥ ತುಂಬಿದೆ, ಜಿನನ ಸ್ವರೂಪ ದರ್ಶನವಿದ್ದಂತಿದೆ.

೧ ಶ್ರೀಮಾನ್, ಸ್ವಯಂಭು, ವೃಷಭ, ಶಂಭವ ಶಂಭವೆ, ಆತ್ಮಭವೆ, ಸ್ವಯಂಪ್ರಭ, ಪ್ರಭವ, ಭೋಕ್ತೃ, ವಿಶ್ವಭುವೆ, ಅಪು ನರ್ಭವ, ವಿಶ್ವಾತ್ಮ, ವಿಶ್ವಲೋಕೇಶ, ವಿಶ್ವತಶ್ಚಕ್ಷು, ಅಕ್ಷರ, ವಿಶ್ವ

ವಿದ್, ವಿಶ್ವ ವಿದ್ಯೇಶ, ವಿಶ್ವಯೋನಯೆ, ಅನಶ್ವರ, ವಿಶ್ವದೃಶ್ವನ, ವಿಭವ, ಧಾತ್ರ, ವಿಶ್ವೇಶ, ವಿಶ್ವಲೋಚನ, ವಿಶ್ವವ್ಯಾಪಿ, ವಿಧಯೆ, ವೇಧಸೆ, ಶಾಶ್ವತ, ವಿಶ್ವತೋಮುಖ, ವಿಶ್ವಕರ್ಮ, ಜಗಜ್ಜ್ಯೇಷ್ಠ, ವಿಶ್ವಮೂರ್ತಿ, ಜಿನೇಶ್ವರ, ವಿಶ್ವದೃತ್, ವಿಶ್ವಭೂತೇಶ, ವಿಶ್ವ ಜ್ಯೋತಿ, ಅನೀಶ್ವರ, ಜಿನ, ಜಿಷ್ಣು, ಅಮೇಯಾತ್ಮ, ವಿಶ್ವರೀಶ, ಜಗತ್ಪತಿ, ಅನಂತಜಿತ್, ಅಚಿಂತ್ಯಾತ್ಮ, ಭವ್ಯಬಂಧ, ಅಬಂಧ, ಯುಗಾದಿಪುರುಷ, ಬ್ರಹ್ಮ, ಪಂಚಬ್ರಹ್ಮಮಯ, ಶಿವ, ಪರಃ, ಪರತರಃ, ಸೂಕ್ಷ್ಮಃ, ಪರಮೇಷ್ಠಿ, ಸನಾತನ, ಸ್ವಯಂಜ್ಯೋತಿ, ಅಜ, ಅಜನ್ಮನ್, ಬ್ರಹ್ಮಯೋನಿಃ, ಅಯೋನಿಜ, ಮೋಹಾರಿ ವಿಜಯಿ, ಜೇತೃ, ಧರ್ಮಚಕ್ರಿ, ದಯಾಧ್ವಜ, ಪ್ರಶಾಂತಾ, ಅನಂತಾತ್ಮ, ಯೋಗಿ, ಯೋಗೀಶ್ವರ, ಬ್ರಹ್ಮವಿತ್, ಬ್ರಹ್ಮತತ್ವಜ್ಞ, ಬ್ರಹ್ಮೋದ್ಯಾವಿತ್, ಯತೀಶ್ವರ, ಶುದ್ಧ, ಬುದ್ಧ, ಪ್ರಬುದ್ಧಾತ್ಮ, ಸಿದ್ಧಾರ್ಥ, ಸಿದ್ಧಶಾಸನ, ಸಿದ್ಧ, ಸಿದ್ಧಾಂತವಿತ್, ಧ್ಯೇಯಾ, ಸಿದ್ಧ ಸಾಧ್ಯ, ಜಗದ್ಧಿತ, ಸಹಿಷ್ಣು, ಅಚ್ಯುತ, ಅನಂತ ಪ್ರಭವಿಷ್ಣು, ಭವೋದ್ಭವ, ಪ್ರಭೂಷ್ಣು, ಅಜರ, ಅಜರ್ಯ, ಭ್ರಾಜಿಷ್ಣು, ಧೀಶ್ವರ, ಅವ್ಯಯ, ವಿಭಾವಸಃ, ಅಸಂಭೂಷ್ಣು, ಸ್ವಯಂಭೂಷ್ಣು, ಪುರಾತನ, ಪರ ಮಾತ್ಮ, ಪರಂಜ್ಯೋತಿ, ೧೦೦ ತ್ರಿಜಗತ್ಪರಮೇಶ್ವರ.

೧೦೧ ದಿವ್ಯಭಾಷಾಪತಿ, ದಿವ್ಯ, ಪೂತವಾಚಃ, ಪೂತಶಾಸನ, ಪೂತಾತ್ಮ, ಪರಮಜ್ಯೋತಿ, ಧರ್ಮಾಧ್ಯಕ್ಷ, ದಮೇಶ್ವರ, ಶ್ರೀಪತಿಃ, ಬಗವತ್, ಅರ್ಹತ್, ಅರಜಃ, ವಿರಜಃ, ಶುಚಿಃ, ತೀರ್ಥ ಕೃತ, ಕೇವಲಿ, ಈಶಾನಃ, ಪೂಜಾರ್ಹ, ಸ್ನಾತಕ, ಅಮಲ, ಅನಂತ ದೀಪ್ತ, ಜ್ಞಾನಾತ್ಮ, ಸ್ವಯಂಬುದ್ಧ, ಪ್ರಜಾಪತಿಃ, ಮುಕ್ತ, ಶಕ್ತ, ನಿರಾಬಾಧ, ನಿಷ್ಕಲ, ಭುವನೇಶ್ವರ, ನಿರಂಜನ, ಜಗಜ್ಜ್ಯೋತಿ, ನಿರುಕ್ತೋಕ್ತ, ನಿರಾಮಯ, ಅಚಲಸ್ಥಿತ, ಅಕ್ಷೋಭ್ಯ, ಕೂಟಸ್ಥ, ಸ್ಥಾಣು, ಅಕ್ಷಯ, ಅಗ್ರಣ್ಯೈ, ಗ್ರಾಮಣ್ಯೈ, ನೇತ್ರ, ಪ್ರಣೇತ್ರ, ನ್ಯಾಯ ಶಾಸ್ತ್ರ ಕೃತ್, ಶಾಸ್ತ್ರ, ಧರ್ಮಪತಿ, ಧರ್ಮ್ಯ, ಧರ್ಮಾತ್ಮ, ಧರ್ಮತೀರ್ಥಕೃತ್, ವೃಷಧ್ವಜ, ವೃಷಾಧೀಶ, ವೃಷಕೇತವೇಃ,

ವೃಷಾಯುಧ, ವೃಷಃ ವೃಷಪತಿ, ಭರ್ತ್ರೀ, ವೃಷಭಾಂಕಾ, ವೃಷೋದ್ಭವ, ಹಿರಣ್ಯನಾಭ, ಭೂತಾತ್ಮ, ಭೂತಭೃತ್, ಭೂತಭಾವ, ಪ್ರಭವ, ವಿಭವ, ಭಾಸ್ವತ್, ಭವ, ಭಾವ, ಭವಾಂತಕ, ಹಿರಣ್ಯಗರ್ಭ, ಶ್ರೀಗರ್ಭ, ಪ್ರಭೂತ ವಿಭವ, ಅಭವ, ಸ್ವಯಂಪ್ರಭ, ಪ್ರಭೂತಾತ್ಮ, ಭೂತನಾಥ, ಜಗತ್ಪತಿ, ಸರ್ವಾದಯ, ಸರ್ವದೃಶ್, ಸಾರ್ವ, ಸರ್ವಜ್ಞ, ಸರ್ವದರ್ಶನ, ಸರ್ವಾತ್ಮಾ, ಸರ್ವಲೋಕೇಶ, ಸರ್ವವಿತ್, ಸರ್ವಲೋಕಜಿತ್ ಸುಗತಃ, ಸುಶ್ರುತ ಸುಶ್ರುತಿ, ಸುವಾಚಃ, ಸೂರಂವೆ, ಬಹುಶ್ರುತ, ವಿಶ್ರುತ, ವಿಶ್ವತಃಪಾದ, ವಿಶ್ವಶೀರ್ಷ, ಶುಚಿಶ್ರವಃ, ಸಹಸ್ರಶೀರ್ಷ, ಕ್ಷೇತ್ರಜ್ಞ, ಸಹಸ್ರಾಕ್ಷ, ಸಹಸ್ರ ಪಾದ, ಭೂತ ಭವ್ಯ ಭವದ್ಭರ್ತ್ರ, ೨೦೦ ವಿಶ್ವವಿದ್ಯಾ ಮಹೇಶ್ವರ.

೭೦೧ ಸ್ಥವಿಷ್ಠ, ಸ್ಥವಿರ, ಜ್ಯೇಷ್ಠ, ಪ್ರೇಷ್ಠ, ಪ್ರಷ್ಠ, ಪರಿಷ್ಠಿ, ಸ್ಥೇಷ್ಠ, ಗರಿಷ್ಠ, ಬಂಹಿಷ್ಠ, ಶ್ರೇಷ್ಠ, ಅಣಿಷ್ಠ, ಗರಿಷ್ಠಗಿ, ವಿಶ್ವಭುಜಿ, ವಿಶ್ವಸೃಜಿ, ವಿಶ್ವೇಶ, ವಿಶ್ವಭುಜ, ವಿಶ್ವನಾಯಕ, ವಿಶ್ವಾಶಿ, ವಿಶ್ವರೂಪಾತ್ಮ, ವಿಶ್ವಜಿತ್, ವಿಜಿತಾಂತಕ, ವಿಭವ, ವಿಭಯ, ವೀರ, ವಿಶೋಕ, ವಿಜರ, ಅಜರ, ವಿರಾಗ, ವಿರತ, ಅಸಂಗ, ವಿವಿಕ್ತ, ವೀತಮತ್ಸರ, ವಿನೇಯ ಜನತಾಬಂಧು, ವಿಲೀನಾ ಶೇಷ ಕಲ್ಮಷ, ವಿಯೋಗ, ಯೋಗವಿತ್, ವಿದುಷ, ವಿಧಾತ್ರ, ಸುವಿಧ, ಸುಧಿಃ, ಕ್ಷಾಂತಿ ಭಾಜ್, ಪ್ರಥಿವೀ ಮೂರ್ತಯೆ, ಶಾಂತಿಭಃ, ಸಲಿಲಾತ್ಮಕ, ವಾಯುಮೂರ್ತಿ, ಅಸಂಗಾತ್ಮಾ, ವಹ್ನಿಮೂರ್ತಿ, ಅಧರ್ಮದಹ, ಸುಯಜ್ವನ್, ಯಜಮಾನಾತ್ಮನ್ ಸುತ್ವನ್, ಸುತ್ರಾಮ ಪೂಜಿತ, ಋತ್ವಿಜ, ಯಜ್ಞಪತಿಃ, ಯಜ್ಞಃ, ಯಜ್ಞಾಂಗ, ಅಮೃತ, ಹವಿಷ, ಯೋಮಮೂರ್ತಿ, ಅಮೂರ್ತಾತ್ಮ, ನಿರ್ಲೇಪ, ನಿರ್ಮಲ, ಅಚಲ, ಸೋಮಮೂರ್ತಿ, ಸುಸೌಮ್ಯಾತ್ಮಾ, ಸೂರ್ಯಮೂರ್ತಿ, ಮಹಾಪ್ರಭ, ಮಂತ್ರವಿತ್, ಮಂತ್ರಕೃತ್, ಮಂತ್ರಿಣಃ, ಮಂತ್ರಮೂರ್ತಿ, ಅನಂತಗ, ಸ್ವತಂತ್ರ, ತಂತ್ರಕೃತ್, ಸ್ವಂತ, ಕೃತಾಂತ, ಕೃತಾಂತ ಕೃತ್, ಕೃತಿನಃ,

ಕೃತಾರ್ಥ, ಸತ್ಕೃತ್ಯ, ಕೃತಕೃತ್ಯ, ಕೃತಕ್ರತು, ನಿತ್ಯ, ಮೃತ್ಯುಂಜಯ, ಅಮೃತ್ಯುಃ, ಅಮೃತಾತ್ಮ, ಅಮೃತೋದ್ಭವ, ಬ್ರಹ್ಮನಿಷ್ಠ, ಪರಬ್ರಹ್ಮ, ಬ್ರಹ್ಮಾತ್ಮಾ, ಬ್ರಹ್ಮಸಂಭವ, ಮಹಾಬ್ರಹ್ಮಪತಿಃ, ಬ್ರಹ್ಮೇಜ್, ಮಹಾಬ್ರಹ್ಮಪದೇಶ್ವರ, ಸುಪ್ರಸನ್ನ, ಪ್ರಸನ್ನಾತ್ಮ, ಜ್ಞಾನ ಧರ್ಮ ದಮ ಪ್ರಭು, ಪ್ರಶಮಾತ್ಮನ್, ಪ್ರಶಾಂತಾತ್ಮನ್, ಪುರಾಣ ೭೦೦ ಪುರುಷೋತ್ತಮ.

೭೦೧ ಮಹಾಶೋಕಧ್ವಜ, ಅಶೋಕ, ಕಾಯ, ಸ್ರಷ್ಟಃ ಪದ್ಮವಿಷ್ಟರ, ಪದ್ಮೇಶ, ಪದ್ಮಸಂಭೂತ, ಪದ್ಮನಾಭ, ಅನುತ್ತರ, ಪದ್ಮಯೋನಿ, ಜಗದ್ಯೋನಿ, ಇತ್ಯಃ, ಸ್ತುತ್ಯಃ, ಸ್ತುತೀಶ್ವರ, ಸ್ತವನಾರ್ಹ, ಹೃಷೀಕೇಶ, ಜಿತಜೇಯ, ಕೃತಕ್ರಿಯಾ, ಗಣಾಧಿಪ, ಗಣಜ್ಯೇಷ್ಠ, ಗಣ್ಯಃ, ಪುಣ್ಯಃ, ಗಣಾಗ್ರಗಣ್ಯ, ಗುಣಾಕರ, ಗುಣಾಂಬೋಧಿ, ಗುಣಜ್ಞ, ಗುಣನಾಯಕ, ಗುಣಾದರಿ, ಗುಣೋಚ್ಛೇದಿ, ನಿರ್ಗುಣ, ಪುಣ್ಯಗಿರಿ, ಗುಣಃ, ತರಣ್ಯಃ, ಪುಣ್ಯವಾಚ, ಪೂತಃ, ವರೇಣ್ಯ, ಪುಣ್ಯನಾಯಕ, ಅಗಣ್ಯ, ಪುಣ್ಯಧಿ, ಗುಣ್ಯಃ, ಪುಣ್ಯಕೃತ್, ಪುಣ್ಯಶಾಸನಃ, ಧರ್ಮಾರಾಮ, ಗುಣ್ಯಗ್ರಾಮ, ಪುಣ್ಯಾಪುಣ್ಯನಿರೋಧಕ, ಪಾಪಾಪೇತ, ವಿಪಾಪಾತ್ಮ, ವಿಪಾಪ್ಮ, ವೀತಕಲ್ಮಷ, ನಿರ್ದ್ವಂದ್ವ, ನಿರ್ಮದ, ಶಾಂತಃ, ನಿರ್ಮೋಹಿ, ನಿರುಪದ್ರವಿ, ನಿರ್ನಿಮೇಶ, ನಿರಾಹಾರ, ನಿಷ್ಕ್ರಿಯಃ, ನಿರುಪಪ್ಲವ, ನಿಷ್ಕಲಂಕ, ನಿರಸ್ತೈನಃ, ನಿರ್ಧೂತಾಗಸಃ, ನಿರಾಸ್ರವ, ವಿಶಾಲ, ವಿಪುಲಜ್ಯೋತಿಃ, ಅತುಲ, ಅಚಿಂತ್ಯವೈಭವ, ಸುಸಂವೃತ, ಸುಗುಪ್ತಾತ್ಮ, ಸುಭುಧಃ, ಸುನಯ ತತ್ವವಿತ್, ಏಕವಿದ್ಯಃ, ಮಹಾವಿದ್ಯಃ, ಮುನಿಃ, ಪರಿವೃಢಃ, ಪತಿಃ, ಧೀಶಃ, ವಿದ್ಯಾನಿಧಿ; ಸಾಕ್ಷಿಃ, ವಿನೇತ್ರ, ವಿಹತಾಂತಕ, ಪಿತ್ರಃ, ಪಿತಾಮಹ, ಪಾತ್ರಃ, ಪವಿತ್ರ, ಪಾವನ, ಅಗತಃ, ತ್ರಾತ್ರ, ಭಿಷಗ್ವರ, ವರ್ಯ, ವರದ, ಪರಮಃ, ಪುಂಸಃ, ಕವಿಃ, ಪುರಾಣ ಪುರುಷ, ವರ್ಷೀಯ, ಋಷಭ, ಪುರುವಃ, ಪ್ರತಿಷ್ಠಾ ಪ್ರಸವ, ಹೇತುವಃ, ೮೦೦ ಭುವನೈಕ ಪಿತಾಮಹ.

೪೦೧ ಶ್ರೀವೃಕ್ಷಲಕ್ಷಣ, ಶ್ಲಕ್ಷ್ಣ, ಲಕ್ಷಣ್ಯ, ಶುಭಲಕ್ಷಣ, ನಿರಕ್ಷ, ಪುಂಡರೀಕಾಕ್ಷ, ಪುಷ್ಕಲ, ಪುಷ್ಕರೇಕ್ಷಣ, ಸಿದ್ಧಿಃ, ಸಿದ್ಧ ಸಂಕಲ್ಪ, ಸಿದ್ಧಾತ್ಮ, ಸಿದ್ಧ ಸಾಧನ, ಬುದ್ಧ ಬೋಧ್ಯ, ಮಹಾ ಬೋಧ, ವರ್ಧಮಾನ, ಮಹರ್ದ್ಧಿಕ, ವೇದಾಂಗ, ವೇದವಿದ್, ವೇದ್ಯ, ಜಾತರೂಪ, ವಿದಾಂವರ, ವೇದವೇದ್ಯ, ಸ್ವಸಂವೇದ, ವಿವೇದ, ವದತಾಂವರ, ಅನಾದಿ ನಿಧನ, ವ್ಯಕ್ತ, ವ್ಯಕ್ತವಾಚಃ, ವ್ಯಕ್ತಶಾಸನ, ಯುಗಾದಿ, ಕೃತ್, ಯುಗಾಧಾರ, ಯುಗಾದಃ, ಜಗದಾದಿಜ, ಅತೀಂದ್ರ, ಅತೀಂದ್ರಿಯ, ಧೀಂದ್ರ, ಮಹೇಂದ್ರ, ಅತೀಂದ್ರಿಯಾರ್ಥ ದೃಕ್, ಅನಿಂದ್ರಿಯ, ಅಹಮಿಂದ್ರಾರ್ಚ್ಯ, ಮಹೇಂದ್ರ, ಮಹಿತ, ಮಹತೆ, ಉದ್ಭವ, ಕಾರಣ, ಕರ್ತೃ, ಪಾರಗ, ಭವತಾರಕ, ಅಗಾಹ್ಯ, ಗಹನ, ಗುಹ್ಯ, ಪರಾರ್ಧ್ಯ, ಪರ ಮೇಶ್ವರ, ಅನಂತರ್ದ್ಧಿಃ, ಅಮೇಯಾರ್ದ್ಧಿ, ಅಚಿಂತ್ಯರ್ದ್ಧಿ, ಸಮಗ್ರಧೀಃ, ಪ್ರಾಗ್ರ್ಯ, ಪ್ರಾಗ್ರಹ, ಅಭ್ಯಗ್ರ, ಪ್ರತ್ಯಗ್ರ, ಅಗ್ರ್ಯ ಅಗ್ರಿಮಾಂಯ, ಅಗ್ರಜ, ಮಹತಾಪಸ, ಮಹಾತೇಜಸ, ಮಹೋ ದರ್ಕ, ಮಹೋದಯ, ಮಹಾಯಶ, ಮಹಾಧಾಮಃ, ಮಹಾ ಸತ್ವ, ಮಹಾಧೃತ, ಮಹಾಧೈರ್ಯ, ಮಹಾವೀರ್ಯ, ಮಹಾ ಸಂಪದಃ, ಮಹಾಬಲ, ಮಹಾಶಕ್ತ, ಮಹಾಜ್ಯೋತಿ, ಮಹಾ ಭೂತ, ಮಹಾದ್ಯುತಿ, ಮಹಾಮತಿ, ಮಹಾನೀತಿ, ಮಹಾಕ್ಷಾಂತ, ಮಹಾದಯಾ, ಮಹಾಪ್ರಜ್ಞ, ಮಹಾನಂದ, ಮಹಾಭಾಗ, ಮಹಾ ಕವಿಃ, ಮಹಾಮಹಃ, ಮಹಾ ಕೀರ್ತಿ, ಮಹಾಕಾಂತಿಃ, ಮಹಾ ವಪುಃ, ಮಹಾದಾನಃ, ಮಹಾಜ್ಞಾನಃ, ಮಹಾಯೋಗಹ್ಯ, ಮಹಾ ಗುಣಃ, ಮಹಾ ಮಹಪತಿ, ಪ್ರಾಪ್ತ ಮಹಾ ಕಲ್ಯಾಣ ಪಂಚಕ, ಮಹಾ ಪ್ರಭವಃ, ಮಹಾ ಪ್ರಾತಿ ಹಾರ್ಯಾಧೀತ, ೫೦೦ ಮಹೇ ಶ್ವರ.

೫೦೧ ಮಹಾಮುನಿ, ಮಹಾಮೌನಿ, ಮಹಾಧ್ಯಾನಿ, ಮಹಾ ದಮ್ಯಃ, ಮಹಾಕ್ಷಮ್ಯಃ, ಮಹಾಶೀಲಹಃ, ಮಹಾಯಜ್ಞಹ, ಮಹಾ ಮಖಃ, ಮಹಾವ್ರತಪತಿ, ಮಹ್ಯ, ಮಹಾ ಕಾಂತಿ ಧರ, ಅಧಿಪಃ

ಮಹಾ ಮೈತ್ರ್ಯ, ಮಹಾಮೇಯ ಮಹೋಪಾಯ, ಮಹೋಮಯ, ಮಹಾಕಾರುಣಿಕ, ಮಂತ್ರಿಃ, ಮಹಾಮಂತ್ರಿಃ, ಮಹಾಮತಿಃ, ಮಹಾನಾದ, ಮಹಾಘೋಷ, ಮಹೇಜ್ಯ, ಮಹಸಾಂಪತಿ, ಮಹಾಧ್ವರಧರ, ಧುರ್ಯ, ಮಹೌದಾರ್ಯ, ಮಹಿಷ್ಠವ, ಮಹಾತ್ಮನ್, ಮಹಸಾಂಧಸು, ಮಹರ್ಷಿಃ, ಮಹಿತೋದಯಃ, ಮಹಾಕ್ಲೇಶಾಂಕುಶ, ಶೂರ, ಮಹಾಭೂತಪತಿ, ಗುರು, ಮಹಾಪರಾಕ್ರಮಿ, ಅನಂತ, ಮಹಾಕ್ರೋಧರಿಪುಃ, ವಶಿನಃ, ಮಹಾಭವಾಬ್ಧಿ ಸಂತಾರಿಣೆ, ಮಹಾಮೋಹಾದ್ರಿ ಸೂದನಃ, ಮಹಾಗುಣಾಕರಃ ಕ್ಷಾಂತಃ, ಮಹಾಯೋಗೀಶ್ವರ, ಶಮಿನ್, ಮಹಾಧ್ಯಾನಪತಿ, ಧ್ಯಾತ್ರ, ಮಹಾಧರ್ಮ, ಮಹಾವ್ರತ, ಮಹಾಕರ್ಮಾರಿ, ಆತ್ಮಜ್ಞ, ಮಹಾದೇವ, ಮಹೇಶಿತ್ರ, ಸರ್ವ ಕ್ಲೇಶಾಪಃ, ಸಾಧು, ಸರ್ವ ದೋಷಹರ, ಹರಃ, ಅಸಂಖ್ಯೆಯ, ಅಪ್ರಮೇಯ, ಶಮಾತ್ಮ, ಪ್ರಶಮಾಕರ, ಸರ್ವಯೋಗೀಶ್ವರ, ಅಚಿಂತ್ಯ, ಶ್ರುತಾತ್ಮ, ವಿಷ್ಟರಶ್ರವ, ದಾಂತಾತ್ಮ, ದಮತೀರ್ಥೇಶ, ಯೋಗಾತ್ಮ, ಜ್ಞಾನಸರ್ವಗಃ, ಪ್ರಧಾನ ಮಾತ್ಮ, ಪ್ರಕೃತಿ, ಪರಮ, ಪರಮೋದಯ, ಪ್ರಕ್ಷೀಣಬಂಧಃ, ಕಾಮಾರಿಃ, ಕ್ಷೇಮಕೃತ್, ಕ್ಷೇಮಶಾಸನಃ, ಪ್ರಣವಾಯಃ, ಪ್ರಣತಃ, ಪ್ರಾಣಃ, ಪ್ರಾಣದಾಯ, ಪ್ರಣತೇಶ್ವರ, ಪ್ರಮಾಣಃ, ಪ್ರಣಿದಯಃ, ದಕ್ಷಃ, ದಕ್ಷಿಣ, ಅಧ್ವರ್ಯ, ಅಧ್ವರ, ಆನಂದ, ನಂದನ, ನಂದಃ, ವಂಧ್ಯಃ, ಅನಿಂದ್ಯ, ಅಭಿನಂದನಃ, ಕಾಮಘ್ನಃ, ಕಾಮದಃ, ಕಾಮ್ಯಃ, ಕಾಮಧೇನು, ೬೦೦ ಅರಿಂಜಯ.

೬೦೧ ಅಸಂಸ್ಕೃತ, ಸುಸಂಸ್ಕಾರ, ಪ್ರಾಕೃತ, ವೈಕೃತಾಂತಕೃತ್, ಅಂತಕೃತ್ ಕಾಂತಗವೆ, ಕಾಂತ, ಚಿಂತಾಮಣಿ, ಅಭೀಷ್ಟದಃ ಅಜಿತ ಜಿತಕಾಮಾರಿ, ಅಮಿತ, ಅಮಿತಶಾಸನ, ಜಿತಕ್ರೋಧ, ಜಿತಾಮಿತ್ರ, ಜಿತಕ್ಲೇಶ, ಜಿತಾಂತಕ, ಜಿನೇಂದ್ರ, ಪರಮಾನಂದ, ಮುನೀಂದ್ರ, ದುಂದುಭಿಸ್ವನ, ಮಹೇಂದ್ರ ವಂದ್ಯ, ಯೋಗೀಂದ್ರ, ಮತೀಂದ್ರ, ನಾಭಿನಂದನ, ನಾಭೇಯ, ನಾಭಿಜ, ಅಜಾತ, ಸುವ್ರತ, ಮನುವು, ಉತ್ತಮ, ಅಭೇದ್ಯ, ಅನತ್ಯಯ, ಅನಾಶ್ವತ್,

ಅಥಿಕ, ಅಧಿಗುರು, ಸುಗೀಃ, ಸುಮೇಧಸ್, ವಿಕ್ರಮಿ, ಸ್ವಾಮಿನ್, ದುರಾಧರ್ಷ, ನಿರುತ್ಸುಕ, ವಿಶಿಷ್ಟ, ಶಿಷ್ಟಭುಜ, ಶಿಷ್ಟ, ಪ್ರತ್ಯಯಃ, ಕಮನ, ಅನಘ, ಕ್ಷೇಮಿ, ಕ್ಷೇಮಂಕರ, ಅಕ್ಷಯ, ಕ್ಷೇಮ ಧರ್ಮ ಪತಿ, ಕ್ಷಮಿಃ, ಅಗ್ರಾಹ್ಯ, ಜ್ಞಾನ ನಿಗ್ರಾಹ್ಯ, ಧ್ಯಾನಗಮ್ಯಃ, ನಿರುತ್ತರ, ಸುಕೃತಿ, ಧಾತುಃ, ಇಜ್ಯಾರ್ಹ, ಸುನಯ, ಚತುರಾನನ, ಶ್ರೀನಿವಾಸ, ಚತುರ್ ವಕ್ತ್ರ, ಚತುರಾಸ್ಯ, ಚತುರ್ಮುಖ, ಸತ್ಯಾತ್ಮ, ಸತ್ಯವಿಜ್ಞಾನ, ಸತ್ಯವಾಚಃ, ಸತ್ಯಶಾಸನಃ, ಸತ್ಯಾಶಿಃ, ಸತ್ಯಸಂಧಾನ, ಸತ್ಯಃ, ಸತ್ಯಪರಾಯಣ, ಸ್ಥೇಯಸ್, ಸ್ಥವೀಯಸ್, ನೇದೀಯಸ್, ದವೀಯಸ್, ದೂರದರ್ಶನಃ, ಅಣೋರಣೀಯಃ, ಅನಣವೆ, ಗರೀಯ ಸಾಮಾದ್ಯಗುರು, ಯೋಗಃ, ಭೋಗಃ, ತೃಪ್ತ, ಶಿವ, ಗತಿಃ, ಸೌಖ್ಯ, ವಿದ್ಯಃ, ಸದೋದಯ, ಸುಘೋಷ, ಸುಮುಖ, ಸೌಮ್ಯ, ಸುಖದಃ, ಸುಹಿತ ಸುಹೃತ್, ಸುಗುಪ್ತ, ಗುಪ್ತಿಭೃತ್, ಗೋಪ್ತ್ರ, ಲೋಕಾಧ್ಯಕ್ಷ, ೭೦೦ ದಮೀಶ್ವರ.

೭೦೧ ಬೃಹತ್, ಬೃಹಸ್ಪತಿ, ವಾಗ್ಮಿ, ವಾಚಸ್ಪತಿ, ಉದಾರಧೀ, ಮನೀಷಿಣಃ, ಧೀಷಣಃ, ಧೀಮತ್, ಶೇಮುಷೀಶ, ಗಿರಾಂಪತಿ, ನೈಕರೂಪ, ನಯೋತ್ತುಂಗ, ನೈಕಾತ್ಮ, ನೈಕಧರ್ಮಕೃತ್, ಅವಿಜ್ಞೇಯ, ಅಪ್ರತರ್ಕತ್ಯಾತ್ಮ, ಕೃತಜ್ಞಾಯ, ಕೃತಲಕ್ಷಣ, ಜ್ಞಾನಗರ್ಭ, ದಯಾಗರ್ಭ, ರತ್ನಗರ್ಭ, ಪ್ರಭಾಸ್ವರ, ಪದ್ಮಗರ್ಭ, ಜಗದ್ಗರ್ಭ, ಹೇಮಗರ್ಭ, ಸುದರ್ಶನ, ಲಕ್ಷ್ಮೀಪತಿ, ತ್ರಿದಶಾಧ್ಯಕ್ಷ, ದೃಢೀಯ, ಇನಃ, ಈಶಿತ್ರ, ಮನೋಹರ, ಮನೋಜ್ಞಾಂಗ, ಧೀರ, ಗಂಭೀರ ಶಾಸನ, ಧರ್ಮಯೂಪ, ದಯಾಯಾಗ, ಧರ್ಮನೇಮಿ, ಮುನೀಶ್ವರ, ಧರ್ಮ ಚಕ್ರಾಯುಧ, ದೇವ, ಕರ್ಮಘ್ನ, ಧರ್ಮ ಘೋಷಣ, ಅಮೋಘವಾಚಃ, ಅಮೋಘಃ, ನಿರ್ಮಲ, ಅಮೋಘಶಾಸನಃ ಸುರೂಪಿ, ಸುಭಗ, ತ್ಯಾಗಿನ್, ಸಮಯಜ್ಞ, ಸಮಾಹಿತ, ಸುಸ್ಥಿತ, ಸ್ವಾಸ್ಥ್ಯಭಾಜ್, ಸ್ವಸ್ಥ, ನೀರಜಸ್ಕ, ನಿರುದ್ಧವ, ಅಲೇಪ, ನಿಷ್ಕಲಂಕಾತ್ಮ, ವೀತರಾಗ, ಗತಸ್ಪೃಹ, ವಶ್ಯೇಂದ್ರಿಯ,

ವಿಮುಕ್ತಾತ್ಮ, ನಿಸ್ಸಪತ್ನ, ಜಿತೇಂದ್ರಿಯ, ಪ್ರಶಾಂತ, ಅನಂತ ಧಾಮರ್ಷಿ, ಮಂಗಲ, ಮಲಘ್ನ, ಅನಘ, ಅನೀದೃಗುಪಮಾಭೂತ ದಿಷ್ಟಿಯೆ, ದೈವ, ಅಮೂರ್ತ, ಮೂರ್ತಿಮತ್, ಏಕಃ, ನೈಕಃ, ನಾನ್ಯೈಕತತ್ವಂ, ದೃಕ್, ಅಧ್ಯಾತ್ಮಗಮ್ಯ, ಗಮ್ಯಾತ್ಮ, ಯೋಗವಿದ್, ಯೋಗಿವಂದಿತ, ಸರ್ವತ್ರಗ, ಸದಾಭಾವಿ, ತ್ರಿಕಾಲವಿಷಯಾರ್ಥದೃಕ್ ಶಂಕರ, ಶಂವದ, ದಾಂತ, ದಮಿಃ, ಕ್ಷಾಂತಿ ಪರಾಯಣ, ಅಧಿಪ ಪರಮಾನಂದ, ಪರಾತ್ಮಜ್ಞ, ಪರಾಪರ, ತ್ರಿಜಗದ್ವಲ್ಲಭ, ಅಭ್ಯರ್ಚ್ಯ, ತ್ರಿಜಗನ್ಮಂಗಲೋದಯ, ತ್ರಿಜಗತ್ಪತಿಪೂಜಾಂಘ್ರಿ, ೮೦೦ ತ್ರಿಲೋಕಾಗ್ರ ಶಿಖಾಮಣಿ,

೮೦೧ ತ್ರಿಕಾಲದರ್ಶಿ, ಲೋಕೇಶ, ಲೋಕಧಾತೃ, ದೃಢವ್ರತ, ಸರ್ವಲೋಕಾತಿಗ, ಪೂಜ್ಯ, ಸರ್ವಲೋಕೈಕಸಾರಥಿ, ಪುರಾಣ ಪುರುಷ, ಪೂರ್ವ, ಕೃತಪೂರ್ವಾಂಗವಿಸ್ತರ, ಆದಿದೇವ, ಪುರಾಣಾದ್ಯ, ಪುರುದೇವ, ಅಧಿದೇವ, ಯುಗಮುಖ್ಯ, ಯುಗಜ್ಯೇಷ್ಠ, ಯುಗಾದಿ ಸ್ಥಿತಿ ದೇಶಕಃ, ಕಲ್ಯಾಣವರ್ಣ, ಕಲ್ಯಾಣ, ಕಲ್ಯಾಯ, ಕಲ್ಯಾಣ ಲಕ್ಷಣ, ಕಲ್ಯಾಣ ಪ್ರಕೃತಿಃ, ದೀಪ್ರಾಯ, ಕಲ್ಯಾಣಾತ್ಮ, ವಿಕಲ್ಮಷ, ವಿಕಲಂಕ, ಕಲಾತೀತ, ಕಲಿಲಘ್ನ, ಕಲಾಧರ, ದೇವದೇವ, ಜಗನ್ನಾಥ ಜಗದ್ಬಂಧು, ಜಗದ್ವಿಭವ, ಜಗದ್ಧಿತೈಷಿಣೆ, ಲೋಕಜ್ಞ, ಸರ್ವಗಃ, ಜಗದಗ್ರಜ, ಚರಾಚರಗುರು, ಗೋಪ್ಯ, ಗೂಢಾತ್ಮ ಗೂಢಗೋಚರ ಸದ್ಯೋಜಾತ ಪ್ರಕಾಶಾತ್ಮ ಜ್ವಲಜ್ಜ್ವಲನಸಪ್ರಭ ಆದಿತ್ಯವರ್ಣ ಭರ್ಮಾಭ ಸುಪ್ರಭ ಕನಕಪ್ರಭ ಸುವರ್ಣವರ್ಣ ರುಕ್ಮಾಭ ಸೂರ್ಯಕೋಟಿ ಸಮಪ್ರಭ ತಪನೀಯ ನಿಭ ತುಂಗ ಬಾಲಾರ್ಕಾಭ ಅನಲಪ್ರಭ ಸಂಧ್ಯಾಭ್ರಬಭ್ರುಃ ಹೇಮಾಭಃ ತಪ್ತಚಾಮೀಕರಚ್ಛವಿಃ ನಿಷ್ಟಪ್ತ ಕನಕಚ್ಛಾಯಃ ಕನತ್ಕಾಂಚನ ಸನ್ನಿಭ ಹಿರಣ್ಯವರ್ಣ ಸ್ವರ್ಣಾಭ ಶಾತಕುಂಭ ನಿಭ ಪ್ರಭ ದ್ಯುಮ್ನಭಃ ಜಾತರೂಪ ತಪ್ತಜಾಂಬೂನದದ್ಯುತಿ ಸುಧೌತ ಕಲಧೌತ ಶ್ರೀ ಪ್ರದೀಪ್ತ ಹಾಟಕದ್ಯುತಿ ಶಿಷ್ಟೇಷ್ಟ ಪುಷ್ಟಿದಃ ಪುಷ್ಟ ಸ್ಪಷ್ಟ ಸ್ಪಷ್ಟಾಕ್ಷರ ಕ್ಷಮಾ ಶತ್ರುಘ್ನ ಅಪ್ರತಿಘ ಅಮೋಘ ಪ್ರಶಾಸ್ತ ಶಾಸಿತ್ರ ಸ್ವಭೂಃ ಶಾಂತಿನಿಷ್ಠ,

ಮುನ್ಯಿಜೇಷ್ಠ ಶಿವತಾತಃ ಶಿವಶ್ರದಃ ಶಾಂತಿದಾಯ ಶಾಂತಿಕೃತ್ಃ ಶಾಂಶಿಃ ಶಾಂತಿಮತಿ ಕಾಮಿತಪ್ರದ ಶ್ರೇಯೋನಿಧಿ ಅಧಿಷ್ಠಾನ ಅಪ್ರತಿಷ್ಠ ಪ್ರತಿಷ್ಠಿತ ಸುಸ್ಥಿತ ಸ್ಥಾವರ ಸ್ಥಾಣ್ನವಃ ಪ್ರಥೀಯಸ್ ಪ್ರಥಿತಃ ೯೦೦ ಪೃಥುಃ

೯೦೧ ದಿಗ್ವಾಸಃ,ವಾತರಶನ,ನಿರ್ಗ್ರಂಥೇಶ,ನಿರಂಬರ,ನಿಷ್ಕಿಂಚನ ನಿರಾಶಂಸ, ಜ್ಞಾನಚಕ್ಷು,ಅಮೋಮುರ್ಹ, ತೇಜೋರಾಶಿ, ಅನಂತೌಜಃ ಜ್ಞಾನಾಬ್ಧಿ ಶೀಲಸಾಗರ ತೇಜೋಮಯ ಅಮಿತಜ್ಯೋತಿ ಜ್ಯೋತಿ ಮೂರ್ತಿ ತಮೋಪಹ ಜಗಚ್ಚೂಡಾಮಣಿ ದೀಪ್ತಿ ಶಂವತೆ ವಿಘ್ನ ವಿನಾಯಕ ಕಲಿಘ್ನ ಕರ್ಮಶತ್ರುಘ್ನ ಲೋಕಾಲೋಕ ಪ್ರಕಾಶಕ ಅನಿದ್ರಾಲವ, ಅತಂದ್ರಾಲವ, ಜಾಗರೂಕ, ಪ್ರಮಾಮಯ, ಲಕ್ಷ್ಮೀಪತಿ ಜಗಜ್ಜ್ಯೋತಿಷಿ, ಧರ್ಮರಾಜ, ಪ್ರಜಾಹಿತ, ಮುಮುಕ್ಷು, ಬಂಧ ಮೋಕ್ಷಜ್ಞ, ಜಿತಾಕ್ಷ, ಜಿತಮನ್ಮಥ, ಪ್ರಶಾಂತರಸಶೈಲೂಷ, ಭವ್ಯ ಪೇಟಕನಾಯಕ ಮೂಲಕರ್ತೃ ಅಖಿಲಜ್ಯೋತಿಃ ಮಲಘ್ನ ಮೂಲ ಕಾರಣ ಆಪ್ತ, ವಾಗೀಶ್ವರ ಶ್ರೇಯಸ್ ಶ್ರಾಯಸೋಕ್ತ ನಿರುಕ್ತವಾಚಃ ಪ್ರವಕ್ತ ವಚಸಾಮೀಶ ಮಾರಜಿತ್ ವಿಶ್ವಭಾವವಿದ ಸುತನವಃ ತನು ನಿರ್ಮುಕ್ತ ಸುಗತ ಹತದುರ್ನಯ ಶ್ರೀಶ ಶ್ರೀಶ್ರಿತಪಾದಾಬ್ಜ ವೀತಭೀಃ ಅಭಯಂಕರ ಉತ್ಸನ್ನದೋಷ ನಿರ್ವಿಘ್ನ ನಿಶ್ಚಲ ಲೋಕ ವತ್ಸಲ ಲೋಕೋತ್ತರ ಲೋಕಪತಿ ಲೋಕಚಕ್ಷುಃ ಅಪಾರಧೀಃ ಧೀರಧೀಃ ಬುದ್ಧಸನ್ಮಾರ್ಗ ಶುದ್ಧ ಸೂನೃತಪೂತವಾಚಃ ಪ್ರಜ್ಞಾಪಾರ ಮಿತ, ಪ್ರಾಜ್ಞ, ಯತಿ, ನಿಯಮಿತೇಂದ್ರಿಯ, ಭದಂತ, ಭದ್ರಕೃತ್, ಭದ್ರಃ ಕಲ್ಪವೃಕ್ಷ ವರಪ್ರದ ಸಮುನ್ಮೂಲಿತ ಕರ್ಮಾರಿ ಕರ್ಮಕಾಷ್ಠಾ ಶುಶುಕ್ಷಣಿ, ಕರ್ಮಣ್ಯ, ಕರ್ಮಠ, ಪ್ರಾಂಶುವೆ, ಹೇಯಾದೇಯ, ವಿಚಕ್ಷಣ ಅನಂತಶಕ್ತಿ ಅಚ್ಛೇದ್ಯ ತ್ರಿಪುರಾರಿ ತ್ರಿಲೋಚನ ತ್ರಿನೇತ್ರ ತ್ರ್ಯಂಬಕ ತ್ರ್ಯಕ್ಷ ಕೇವಲ ಜ್ಞಾನವೀಕ್ಷಣ ಸಮಂತಭದ್ರ ಶಾಂತಾರಿಃ ಧರ್ಮಾಚಾರ್ಯ ದಯಾನಿಧಿ ಸೂಕ್ಷ್ಮದರ್ಶಿ ಜಿತಾನಂಗ ಕೃಪಾಲು ಧರ್ಮದೇಶಕ ಶುಭಯು ಸುಖಸಾದ್ಭೂತ ಪುಣ್ಯರಾಶಿ ಅನಾಮಯ ಧರ್ಮಪಾಲ ಜಗತ್ಪಾಲ ೧೦೦೮ ಧರ್ಮಸಾಮ್ರಾಜ್ಯನಾಯಕ

ಈ ರೀತಿ ಆದಿ ಜಿನನ ಸಾವಿರದೆಂಟು ಹೆಸರುಗಳ ಹಿಂದೆ ಓಂ ಹ್ರೀಂ ಅರ್ಹಂ ಎಂದೂ ಮುಂದೆ ನಮಃ ಎಂದೂ ಹೊಂದಿಸಿಕೊಂಡು ನಮಸ್ಕಾರ ಮಾಡಬೇಕು. ಮಾದರಿಗಾಗಿ ೧೦೦೮ "ಓಂ ಹ್ರೀಂ ಅರ್ಹಂ ಧರ್ಮಸಾಮ್ರಾಜ್ಯನಾಯಕರಿಗೆ ನಮಃ" ಎಂದಿಟ್ಟುಕೊಳ್ಳಬೇಕು. ಅದೇ ಜಲಗಂಧಾದಿ ಅರ್ಚನೆಗಳನ್ನು ಮಾಡುವಾಗ ಕೊನೆಗೆ "ನಮಃ"ದ ಬದಲಾಗಿ "ಸ್ವಾಹಾ" ಎಂಬ ಶಬ್ದವನ್ನು ಉಚ್ಚರಿಸ ಬೇಕು.

## ಪಂಚಸ್ತೋತ್ರ

ಜೀವನಿಗೆ ಅಶುಭೋಪಯೋಪದಿಂದ ಪಾಪ ಬಂಧವೂ ಪುಣ್ಯೋಪಯೋಗದಿಂದ ಪುಣ್ಯ ಬಂಧವೂ ಆಗುವವು. ಪುಣ್ಯ ಬಂಧಕ್ಕೆ ಒಳ್ಳೆಯ ಆಚರಣೆ ಕಾರಣವಾಗಿದೆ. ಅದರಂತೆ ಈ ಪಂಚ ಸ್ತೋತ್ರ, ಪಠನವೂ ನಿಮಿತ್ತ ಕಾರಣವಾಗಿದೆ. ಶ್ರೀ ಮಾನತುಂಗಾ ಚಾರ್ಯರು ಭೋಜರಾಜನಿಂದ ಉಪಸರ್ಗ ಹೊಂದಿವಾಗ ಅದರ ನಿವಾರಣೆಗಾಗಿ ಭಕ್ತಾಮರ ಸ್ತೋತ್ರವನ್ನು ರಚಿಸಿದರು. ಈ ಸ್ತೋತ್ರ, ಪಠನೆಯಿಂದ ರಾಜನಿಂದ ಪೂಜಿಸಲ್ಪಟ್ಟರು. ಶ್ರೀ. ಸಿದ್ಧ ಸೇನ ದಿವಾಕರರು ತಮ್ಮ ಪಾಂಡುರೋಗ ನಿವಾರಣೆಗಾಗಿ ಕಲ್ಯಾಣ ಮಂದಿರ ಸ್ತೋತ್ರವನ್ನು ರಚಿಸಿದರು. ಅದರಂತೆ ಧನಂಜಯ ಕವಿಯು ವಿಷಾಪಹಾರ ಸ್ತೋತ್ರವನ್ನು ರಚಿಸಿ ವಿಷನಿವಾರಣೆ ಮಾಡಿ ಕೊಂಡನು. ಹಾಗೆಯೇ ಶ್ರೀ ವಾದಿರಾಜ, ಭೂಪಾಲರೂ ಒಂದೊಂದು ಸಂದರ್ಭದಲ್ಲಿ ಏಕೀಭಾವ, ಭೂಪಾಲಸ್ತೋತ್ರಗಳನ್ನು ರಚಿಸಿದ್ದಾರೆ. ಇವುಗಳನ್ನು ಭಕ್ತಿಯಿಂದ ಪಠಿಸುವುದರಿಂದ ಪುಣ್ಯ ದೊರೆಕೊಳ್ಳು ವುದು. ಇವುಗಳಿಗೆ ಪಂಚಸ್ತೋತ್ರವೆಂದು ಹೆಸರು.

## ೧ ಭಕ್ತಾಮರ ಸ್ತೋತ್ರ.

**ಶ್ರೀ ಮಾನತುಂಗಾಚಾರ್ಯರು ಈ ಸ್ತೋತ್ರದ ಆರಂಭದಲ್ಲಿ ಹದಿ ನೆಂಟು ದೋಷ ರಹಿತನೂ ಅನಂತಜ್ಞಾನ ಎಂಟು ಗುಣಗಳಿಂದ ಪರಿ ಪೂರ್ಣನೂ ಆದಂಥ ಆದಿಜಿನೇಂದ್ರನನ್ನು ನಮಸ್ಕರಿಸುತ್ತಾರೆ.**

ದೇವತೆಗಳಿಂದ ನಮಸ್ಕರಿಸಲ್ಪಡುವಂಥವರೂ ಸಕಲ ತತ್ವ ಶಾಸ್ತ್ರ ಗಳನ್ನು ಬಲ್ಲವರೂ ಭವ್ಯಾತ್ಮರ ಮನಸ್ಸನ್ನು ಸೆಳೆಯುವಂಥವರೂ ಆದಿಭಗವಂತರು ಆಗಿದ್ದಾರೆ. ಭಗವಂತನೆ! ನಿನ್ನ ಅಗಮ್ಯವಾದ ಗುಣಗಳ ಗಾನ ಮಾಡುವದೆಂದರೆ ಬಾಲಕನು ನೀರಿನಲ್ಲಿ ಮೂಡಿದ ಚಂದ್ರ ಬಿಂಬವನ್ನು ಹಿಡಿಯಲು ಹೋದಂತೇನೇ ಇರುವುದು. ಅಷ್ಟು ಅಲ್ಪನು ನಾನು. ಆದರೂ ಗಾಳಿಯಿಂದ ಅಲ್ಲೋಲ ಕಲ್ಲೋಲವಾದ ಸಮುದ್ರವನ್ನು ಈಸುವುದು ಮನುಷ್ಯನಿಗೆ ಸಾಧ್ಯ ವಿಲ್ಲವಾದರೆ ಮತ್ತೆ ಏನಾದರೂ ಸಹಾಯ ಉಪಯೋಗಿಸಿ ದಾಟುವ ದಿಲ್ಲವೇ? ಹಾಗೆಯೇ ನಾನೂ ಸ್ತುತಿಸಲು ಪ್ರಯತ್ನಿಸುತ್ತೇನೆ. ಇದ ರಲ್ಲಿ ನಾನು ಅಶಕ್ತನಾದರೂ ಬುದ್ಧಿ ಹೀನನಾದರೂ ಮಾಡಿಯೇ ತೀರುವೆ. ಹೆಣ್ಣು ಜಿಂಕೆಯು ತನ್ನ ಮರಿಗಳ ಜೀವ ಉಳಿಸಲಿಕ್ಕೆಂದು ತನ್ನ ಶಕ್ತಿಯನ್ನರಿಯದೆ ಸಿಂಹದ ಎದುರಿಗೂ ಹೋಗುತ್ತದಲ್ಲವೆ?

ವಸಂತ ಋತುವಿನಲ್ಲಿ ಮಾವಿನ ಚಿಗುರುಗಳನ್ನು ತಿನ್ನುವುದ ರಿಂದಲೇ ಕೋಕಿಲೆಗೆ ಅಂಥ ಸುಂದರ ಕಂಠ ಬಂದಿರುವದಲ್ಲವೆ? ಹಾಗೆ ನಾನು ಅಲ್ಪ ಪ್ರಮಾಣದಿಂದ ಶಾಸ್ತ್ರಗಳನ್ನು ನೋಡಿಕೊಂಡ ವನಾದರೂ ಭಕ್ತಿ ಬಲವೇ ನಿಮ್ಮನ್ನು ಸ್ತುತಿಸಲು ಸಾಮರ್ಥ್ಯವನ್ನಿ ತ್ತಿದೆ. ಜ್ಞಾನ ಭಕ್ತಿಗಳಿಂದ ಪ್ರೇರಿತರಾಗಿ ನಿಮ್ಮನ್ನು ಸ್ತುತಿಸುವದ ರಿಂದ ಸೂರ್ಯೋದಯಕ್ಕೆ ಕತ್ತಲೆ ಓಡಿದಂತೆ ನಮ್ಮ ಪಾಪ ಪರಿ ಹಾರವಾಗುವದು. ಕಮಲದಲ್ಲಿ ನಿಂತ ನೀರ-ಹನಿ ಮುತ್ತಿನಂತೆ ತೋರುವುದು. ಅದು ಕಮಲದ ಆಶ್ರಯದಿಂದ. ಹಾಗೆಯೇ ನನ್ನ ಅಲ್ಪನ ಸ್ತುತಿಗಳಾದರೂ ನಿನ್ನ ವಿಷಯಕ್ಕಿರುವದರಿಂದ ಭವ್ಯರ ಮನ ಸ್ಸಿಗೆ ತೃಪ್ತಿಯನ್ನೀಯುವವು. ಸೂರ್ಯ ಎಲ್ಲಿ ಯಾವಾಗ ಉದಿಸಿದ ರೇನು ಇಲ್ಲಿ ಕಮಲಗಳು ಅರಳುವವಿಲ್ಲವೆ? ಹಾಗೆಯೇ ನಿನ್ನ ಪ್ರಭೆ ಯಿಂದ ಭವ್ಯರ ಮನಸ್ಸು ವಿಕಸಿತಗೊಳ್ಳುವದು. ಸಿರಿವಂತರ ಸೇವ ಕರೂ ಸುಖಿಗಳಾಗುವದಿಲ್ಲವೆ? ಹಾಗೆಯೇ ನಿನ್ನ ಭಕ್ತರಲ್ಲಿಯೂ ನಿನ್ನ ಅನಂತ ಸುಖ ವೀರ್ಯಗಳು ಕಾಲಾಂತರದಲ್ಲಿ ಬರುವವು. ನಿನ್ನ ರೂಪ 'ದಿವ್ಯ. ನಿನ್ನ ಸೌಂದರ್ಯದ ಅರಿವಾದ ಮೇಲೆ ಜಗತ್ತಿನ

ಯಾವ ಸೌಂದರ್ಯವನ್ನೂ ನೋಡಲು ಮನಸ್ಸಾಗುವದಿಲ್ಲ. ಕ್ಷೀರ
ಸಾಗರದ ನೀರನ್ನು ಕುಡಿದ ಮೇಲೆ ಉಪ್ಪು ನೀರನ್ನು ಕುಡಿಯಲಾ
ದೀತೆ? ಶಾಂತ ಸುಭಗ ಸ್ವರೂಪ ನಿನ್ನದು. ನಿನ್ನನ್ನುಳಿದು ಕಣ್ಣಿಗೆ
ರಾಗದ್ವೇಷಾದಿ ದೋಷ ಸೂಚಕವಾದ ಇತರ ದೇವತೆಗಳ ದರ್ಶನ
ಮಾಡಲು ರುಚಿಸುವದಿಲ್ಲ. ಚಂದ್ರ ಹಗಲು ಕಂದಾಗುವ. ಅದರಿಂದ
ಅವನಿಗೆ ನಿಮ್ಮ ಮುಖವನ್ನು ಹೇಗೆ ಹೋಲಿಸುವದು? ನಿಮ್ಮದು
ಸರ್ವಾತಿಶಯ ಸೌಂದರ್ಯವು; ಚಿರಂತನ ಸೌಂದರ್ಯವು. ನಿನ್ನ
ಗುಣಗಳು ನರಸುರ ಧರಣೇಂದ್ರರಲ್ಲಿ ಯಾರಿಗೂ ಇಲ್ಲ. ಗಾಳಿ
ಪರ್ವತವನ್ನು ನಡುಗಿಸಲಾರದು. ಅದರಂತೆ ದೇವ ಸ್ತ್ರೀಯರ
ಸೌಂದರ್ಯ ನಿಮ್ಮ ಚಿತ್ತಕ್ಕೆ ಚಾಂಚಲ್ಯವನ್ನುಂಟು ಮಾಡದು.
ಮೋಹಿಸುವುದೂ ಅಶಕ್ಯ. ದೀಪದಿಂದ ಪದಾರ್ಥ ಕಾಣುವಂತೆ
ನಿಮ್ಮ ಜ್ಞಾನ ಪ್ರಭೆಯಿಂದ ಲೋಕಾಲೋಕಗಳೆಲ್ಲ ಬೆಳಗುವವು.

ನಿಮ್ಮನ್ನು ಸೂರ್ಯನಿಗೆ ಹೋಲಿಸುವುದೂ ಸರಿಯಲ್ಲ. ಅವ
ನಿಗೂ ಉದಯಾಸ್ತಗಳಿವೆ, ಗ್ರಹಣವಿದೆ. ಚಂದ್ರನಿಗೂ ಕ್ಷಯ
ವೃದ್ಧಿಗಳಿವೆ. ಇವು ನಿಮಗೆ ಇಲ್ಲ. ಬೆಳೆ ಬಂದಾಗ ಮಳೆಯ ಅವಶ್ಯ
ಕತೆ ಹೇಗಿಲ್ಲವೋ ಹಾಗೆಯೇ ನಿನ್ನ ದರ್ಶನವಾದಾಗ ಈ ಸೂರ್ಯ
ಚಂದ್ರರೂ ಬೇಕಿಲ್ಲ. ನಿನ್ನ ಜ್ಞಾನ ರತ್ನಪ್ರಭೆ ಇದ್ದಂತೆ. ಹರಹರಾದಿ
ಗಳ ಜ್ಞಾನ ಕಾಚಿನ ಪ್ರಭೆಯಿದ್ದಂತೆ. ಆದರೂ ಅವರ ದರ್ಶನವನ್ನೇ
ಮೊದಲು ಮಾಡುವೆ. ಅಂದರೆ ನಿನ್ನ ದರ್ಶನದ ಮಹಿಮೆ ಗೊತ್ತಾ
ಗುವದು. ಮರುದೇವಿ ಪೂರ್ವದಿಗಂಗನೆ ಇದ್ದಂತೆ. ಉಳಿದ ದಿಸೆ
ಗಳಲ್ಲಿ ನಕ್ಷತ್ರಗಳು ಹುಟ್ಟಬಲ್ಲವಾದರೂ ಅವಳಲ್ಲಿ ನಿಮ್ಮಂಥಹರ
ಜನ್ಮವೇ ಆಗುವುದು. ನಿಮ್ಮನ್ನು ಅನುಕರಣ ಮಾಡದೆ ಮೋಕ್ಷಕ್ಕೆ
ಬೇರೆ ದಾರಿಯಿಲ್ಲ. ನಿಮ್ಮ ಗುಣಗಳು ಯೋಗಿಗಳಿಗೇ ಗೋಚರಿಸು
ವಂತಹವು. ಅಂತಹ ಅನಂತ ಗುಣಶೀಲಗಳು ನಿನ್ನವು. ಬುದ್ಧ,
ಶಂಕರ, ಬ್ರಹ್ಮ; ಪುರುಷೋತ್ತಮರೆಂಬ ಹೆಸರುಗಳಿಂದ ಕರೆಯಲ್ಪ
ಡುವ ದೇವರ ಸತ್ತು ನೀವೇ ಆಗಿದ್ದೀರಿ. ಭವಸಾಗರವನ್ನು ಬತ್ತಿಸು

ವಂತಹ ನಿನಗೆ ನನ್ನ ನಮಸ್ಕಾರವು. ಆತ್ಮ ಕಲ್ಯಾಣಕ್ಕೆ ನಿನ್ನ ಉದಯವಿದೆ. ಅಶೋಕವೃಕ್ಷ ಭಾಮಂಡಲಗಳು ನಿನ್ನ ಪ್ರಭೆಯಲ್ಲಿ ಬೆಳಗುತ್ತಲಿವೆ. ನಿನ್ನ ಮಹಿಮೆ ಅಚಿಂತ್ಯವಾಗಿದೆ. ಮಲ್ಲಿಗೆ ಹೂವಿನಂತಹ ಚಾಮರ ಪಂಕ್ತಿ ಎರಡೂ ಮಗ್ಗಲು ನಿನಗಿದೆ. ನಿನ್ನ ಮೇಲಿರುವ ಮುಕ್ಕೊಡೆಯು ನೀನೇ ಮೂರೂ ಲೋಕದ ಒಡೆಯನೆಂಬುದನ್ನು ಸೂಚಿಸುವಂತಿದೆ. ಸಮವಸರಣದ ದೇವ ದುಂದುಭಿರವವು. ಕರ್ಮಗಳೆಂಬ ಶತ್ರುಗಳನ್ನು ಜಯಿಸಿದ ಭೇರಿಯಂತಿರುವದು. ಇದೊಂದು ನಿಮ್ಮ ಪ್ರಾತಿಹಾರ್ಯವೆನಿಸಿದ ಸಂಪತ್ತು. ಮಂದಾರ, ಸುಂದರ, ನಮೇರು, ಪಾರಿಜಾತ ಸಂಜಾನಕ ಮೊದಲಾದ ಹೂವುಗಳ ವೃಷ್ಟಿ ಸಮವಸರಣದಲ್ಲಿ ನಿನ್ನ ಮೇಲಾಗುವುದು. ನಿನ್ನ ಭಾಮಂಡಲ ಚಂದ್ರನಂತೆ ಕಾಂತಿಯುಕ್ತವಾಗಿದೆ. ನಿನ್ನ ಮಾತು ದಿವ್ಯವಾಗಿದೆ. ನೀನು ಹೆಜ್ಜೆ ಇಡುವಲ್ಲೆಲ್ಲ ದೇವತೆಗಳು ಕಮಲಗಳನ್ನು ನಿರ್ಮಿಸುವರು. ನಿನಗೆ ಮೇಲೆ ಹೇಳಿದ ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಾಸನ ಭಾಮಂಡಲ, ದೇವದುಂದುಭಿ, ಮುಕ್ಕೊಡೆ, ಈ ಎಂಟು ಪ್ರಾತಿಹಾರ್ಯಗಳಿವೆ. ಮದೋನ್ಮತ್ತ ಆನೆಯು ಕೂಡ ನಿಮ್ಮನ್ನು ಕಂಡು ಶಾಂತವಾಗುವದು. ನಿಮ್ಮ ಭಕ್ತರ ವಿಷಯಕ್ಕೆ ಸಿಂಹವೂ ಕೂಡ ಅಹಿಂಸಕವಾಗುವದು. ನಿಮ್ಮ ನಾಮ ಸಂಕೀರ್ತನೆಯಿಂದ ಕಾಡುಗಿಚ್ಚು ಕೂಡ ತಣ್ಣಗಾಗುವದು. ಹಾವಿನ ವಿಷವನ್ನು ಕಳೆಯುವದು ನಿಮ್ಮ ನಾಮದ ಜಪತಪ. ನಿಮ್ಮ ಭಕ್ತಿಯ ಬಲದ ಮುಂದೆ ಎಂಥ ಸೈನ್ಯಬಲವೂ ತಡೆಯಲಾರದು. ನಿಮ್ಮ ಪಾದಭಕ್ತಿ ಎಲ್ಲ ಅನಿಷ್ಟವನ್ನು ನಷ್ಟಗೊಳಿಸುವದು. ನಿಮ್ಮ ನಾಮ ಸ್ಮರಣದಿಂದ ಮುಳುಗುವ ಹಡಗವೂ ತೇಲಿ ದಡ ಸೇರುವುದು. ನಿಮ್ಮ ಪಾದ ದೂಳಿಯಿಂದ ಎಲ್ಲ ರೋಗಗಳೂ ನಿವಾರಣೆಯಾಗುವವು. ನಿಮ್ಮ ಸ್ಮರಣೆಯಿಂದ ಬಂಧನವೂ ಪರಿಹಾರವಾಗುವದು. ಈ ಭಕ್ತಾಮರ ಸ್ತೋತ್ರ ಪಠನವು ಭವ ಭಯವನ್ನು ನೀಗಿಸುವುದು. ಈ ಸ್ತೋತ್ರವೊಂದು ಹೂವಿನ ಹಾರವಿದ್ದಂತೆ. ಇದನ್ನು ಧರಿಸುವವರಿಗೆ ಮೋಕ್ಷ ಲಕ್ಷ್ಮಿಯು ತಾನಾಗಿಯೇ ಒಲಿದು ಬರುವಳು.

## ೨ ಕಲ್ಯಾಣಮಂದಿರಸ್ತೋತ್ರ.

ಕಮಠನ ಘೋರೋಪಸರ್ಗವನ್ನು ಲಕ್ಷ್ಯಕ್ಕೆ ತಾರದೆ ಕೇವಲ ಜ್ಞಾನವನ್ನು ಪಡೆದು ಜಗತ್ಪೂಜ್ಯನಾದ ಶ್ರೀ ಪಾರ್ಶ್ವನಾಥ ತೀರ್ಥಂಕರರನ್ನು ಸ್ತುತಿಸುತ್ತೇನೆ. ಹಗಲಿನಲ್ಲಿ ಕುರುಡಾದ ಗೂಬೆಯು ಸೂರ್ಯನನ್ನು ನೋಡಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಅಲ್ಪಜ್ಞನಾದ ನಾನು ನಿಮ್ಮ ಗುಣನಿಧಿಯನ್ನು ಕಂಡು ವರ್ಣಿಸಲು ಅಸಮರ್ಥ. ಪ್ರಳಯ ಕಾಲದಲ್ಲಿ ಸಾಗರದ ನೀರೆಲ್ಲ ಬತ್ತಿಹೋದರೂ ರತ್ನಗಳನ್ನು ಎಣಿಸಲು ಸಾಧ್ಯವಿಲ್ಲ. ಅದರಂತೆಯೇ ಮಾನವನ ಅಜ್ಞಾನ ತೊಲಗಿದರೂ ನಿಮ್ಮ ಸಂಪೂರ್ಣ ಗುಣಗಳನ್ನು ಅರಿಯುವದು ಅಸಾಧ್ಯ. ಬಾಲಕನು ಕೂಡ ಸಮುದ್ರದ ಪರಿಮಾಣವನ್ನು ತನ್ನ ಪುಟ್ಟ ಕೈಗಳನ್ನು ನೀಡಿ ತೋರಿಸುವಂತೆ ನಾನು ನಿನ್ನ ಗುಣಗಾನಕ್ಕೆ ನಿಂತಿರುವೆ. ಪಕ್ಷಿಗಳು ಅಸ್ಫುಟವಾಗಿ ಮಾತಾಡುವಂತೆ ಅಲ್ಪಮತಿಯಾದ ನಾನೂ ನಿಮ್ಮ ಹೆಸರುಗಳನ್ನು ನುಡಿಯುವೆ. ಬೇಸಿಗೆಯ ತಾಪವನ್ನು ಸರೋವರದ ಮೇಲಿಂದ ಬರುವ ಗಾಳಿಯೂ ಕೂಡ ಕಳೆಯುವಂತೆ ನಿಮ್ಮ ನಾಮಸ್ಮರಣೆಯು ಭವದುಃಖವನ್ನು ಕಳೆಯುವದು. ನವಿಲು ವನವನ್ನು ಪ್ರವೇಶಿಸಿದಾಗ ಶ್ರೀಗಂಧಕ್ಕೆ ಸುತ್ತಿದ ಹಾವುಗಳು ಬಿಟ್ಟು ಹೋಗುವಂತೆ ನಿಮ್ಮ ನಾಮ ಮಾನವನ ಹೃದಯವನ್ನು ಸೇರಿದರೆ ಸಾಕು ಎಲ್ಲ ಕರ್ಮ ಹೋಗುವುದು.

ಬೆಳಕಾದ ಕೂಡಲೆ ದನಗಳನ್ನು ಕಳ್ಳನು ಬಿಟ್ಟು ಹೋಗುವಂತೆ ನಿಮ್ಮ ದರ್ಶನದಿಂದ ಕರ್ಮ ಓಡಿಹೋಗುವದು. ಚರ್ಮದ ಚೀಲದಲ್ಲಿ ತುಂಬಿದ ಹವೆಯ ಮೂಲಕವಾಗಿ ಅದು ತೇಲುತ್ತದೆ. ಹಾಗೆಯೇ ಮಾನವನ ಹೃದಯದಲ್ಲಿ ನಿಮ್ಮ ನಾಮಸ್ಮರಣೆಯಿದ್ದರೆ ಅವನು ಸಂಸಾರ ಸಮುದ್ರದಲ್ಲಿ ಈಸಲು ಶಕ್ತನಾಗುವನು. ಯಾವ ಕಾಮ ಶಿವನನ್ನು ಸೋಲಿಸಿದನೋ ಅಂತಹ ಕಾಮನನ್ನು ನೀವು ಸೋಲಿಸಿದ್ದೀರಿ. ನಿಮ್ಮ ಮಹಿಮೆಯನ್ನು ಮಾತಿನಿಂದ ಹೇಳಲ್ಪಡುವದಿಲ್ಲ. ಹೃದಯದಿಂದಲೇ ಭಾವಿಸಿ ತಿಳಿಯಬೇಕು. ಹಿಮವು ಬೆಂಕಿಗಿಂತ ತಂಪಾದರೂ ತರುಗಳನ್ನು ಒಣಗಿಸುವುದು. ಅದರಂತೆ

ನೀವು ಶಾಂತರಾದರೂ ಕರ್ಮವನ್ನು ದಹಿಸಬಲ್ಲಿರಿ. ನೀವು ಧ್ಯಾನಕ್ಕೆ ಗೋಚರರು. ಶಿಲೆಯೊಳಗಣ ಸುವರ್ಣದಂತಿದ್ದಾ ಜೀವನು ನಿಮ್ಮ ಧ್ಯಾನವೆಂಬ ಅಗ್ನಿಯಿಂದ ಪರಮಾತ್ಮನಾಗುವನು. ಎಲ್ಲಕ್ಕೂ ಭಾವ ಮುಖ್ಯ. ಕಾಮಾಲೆಯಾದವರ ಕಣ್ಣಿಗೆ ಬಿಳಿಯ ಶಂಖವು ಹಳದಿ ಕಾಣುವಂತೆ ಜನಗಳು ಯಾವ ದೃಷ್ಟಿಯಿಂದ ನಿಮ್ಮನ್ನು ಕಂಡರೋ ಹಾಗೆ ನೀವು ಕಂಡಿರಿ. ನಿಜಸ್ಥಿತಿಯನ್ನು ಅರಿಯದವರಿಗೆ ಅವರವರಿಗೆ ಇಷ್ಟನಾದ ಬ್ರಹ್ಮ, ವಿಷ್ಣು, ಶಿವಾದಿ ದೇವತೆಗಳಂತೆ ಗೋಚರಿಸಿದಿರಿ. ನಿಮ್ಮನ್ನು ಆಶ್ರಯಿಸಿದ ಮರವೂ ಕೂಡ 'ಅಶೋಕ'ವಾಯಿತು. ಇಂದ ಮೇಲೆ ಮಾನವನಾಗನೇ! ಪುಷ್ಪವೃಷ್ಟಿಯಂತೆ ನಿಮ್ಮ ದೃಷ್ಟಿ ಜನರ ಮೇಲೆ ಬಿದ್ದಾಗ ಕರ್ಮಕ್ಷಯವಾಗುವದು. ನಿಮ್ಮ ದಿವ್ಯಧ್ವನಿಯು ಜನರನ್ನು ಮುಕ್ತರನ್ನಾಗಿ ಮಾಡುವದು. ಎರಡೂ ಪಕ್ಕಗಳು ಬೀಸುವ ಚಾಮರಗಳು ಜನತೆಯೊಳಗಿನ ಕರ್ಮಮಲವನ್ನು ಹೊರ ದೂಡುವಂತೆ ಬೀಗುತ್ತವೆ. ಮೋಡವನ್ನು ಕಂಡು ನವಿಲು ನರ್ತಿಸುವಂತೆ ನಿಮ್ಮನ್ನು ಕಂಡು ಸಮವ ಸರಣವಲ್ಲಿ ಜನ ಸಂತೋಷಗೊಳ್ಳುವುದು. ದೇವದುಂದುಭಿಯು ಸಂಸಾರ ಅಸಾರ ವೆಂದು ಸಾರುವಂತೆ ನನಗೆ ಭಾಸವಾಗುವದು. ನಿಮ್ಮ ಮುಕ್ಕೊಡೆಯು ಚಂದ್ರನಂತೆ ಕಾಂತಿಯುಕ್ತವಾಗಿದೆ. ಆದರೆ ಚಂದ್ರನಿಂದ ತೊಲಗದ ಅಜ್ಞಾನಾಂಧಕಾರ ಅದರಿಂದ ತೊಲಗುವದು. ನಿಮ್ಮ ಕಾಂತಿ ಮಾಣಿಕದ ಕೋಟೆ, ಪ್ರತಾಪ ಬಂಗಾರದ ಕೋಟೆ, ಯಶಸ್ಸು ಬೆಳ್ಳಿಯ ಕೋಟೆಯಾಗಿ ಸಮವಸರಣ ಒಪ್ಪುವದು. ಎಲ್ಲ ದೇವತೆಗಳಿಂದಲೂ ಪೂಜೆಗೊಳ್ಳುವಂತಹರು ನೀವು ನೀರಿನಲ್ಲಿ ಡಬ್ಬು ಹಾಕಿದ ಮಣ್ಣಿನ ಕೊಡ ಮುಳುಗದಂತೆ ಕರ್ಮವಿಮುಖರನ್ನು ಆಶ್ರಯಿಸಿದರೆ ಸಂಸಾರ ಸಾಗರವನ್ನು ಸಹಜವಾಗಿ ಈಸಬಹುದು. ನೀವು ಕೇವಲ ಜ್ಞಾನವುಳ್ಳವರು. ನಿಮಗೆ ಉಪಸರ್ಗ ಮಾಡಿದ ಕಮಠ ತಾನೇ ಉಪಹತಿ ಹೊಂದಿದನು. ನಿಮ್ಮನ್ನು ಧ್ಯಾನಿಸುವವರ ಜನ್ಮ ಸಾರ್ಥಕವಾಗುವದು. ಹಿಂದಿನ ಜನ್ಮಗಳಲ್ಲಿ ನಾನು ನಿಮ್ಮ ನಾಮಸ್ಮರಣೆ ಮಾಡಿಲ್ಲ. ಅಂತಲೇ ಭವದಲ್ಲಿ ತೊಳಲುತ್ತಿದ್ದೇನೆ. ಪೂಜಿಸಿಲ್ಲವೆಂದೇ ದುಃಖಗಳಿಗೆ

ಪಾತ್ರನಾಗಿರುವೆ. ದರ್ಶನಮಾಡಿಲ್ಲವೆಂದೇ ಬಾಹ್ಯವಸ್ತುಗಳ ವ್ಯಾಮೋಹಕ್ಕೆ ಒಳಗಾಗಿರುವೆ. ಭಕ್ತಿ ಇಡಲಿಲ್ಲ ವೆಂದು ದುಃಖಕ್ಕೆ ಗುರಿಯಾದೆ. ಸ್ವಾಮಿಯೇ ಕರ್ಮ ಬೀಜವನ್ನು ನಷ್ಟಗೊಳಿಸು. ನಾನು ಇಷ್ಟುದಿನ ಕರ್ಮಶತ್ರುಗಳಿಂದ ಕೊಳ್ಳೆಹೊಡೆಯಲ್ಪಟ್ಟಿದ್ದೆ. ನನಗೆ ಜೀವ ತುಂಬು. ಜನ್ಮನಿವೃತ್ತಿಯನ್ನು ಮಾಡು. ನಿಮ್ಮ ಹೊರತಾಗಿ ನನ್ನನ್ನು ಉಳಿಸುವವರು ಯಾರೂ ಇಲ್ಲ. ಶ್ರೀ ಪಾರ್ಶ್ವ ತೀರ್ಥಂಕರರೇ! ತಮ್ಮನ್ನು ಸ್ತುತಿಸುವವರಿಗೆ ಮೋಕ್ಷ ಲಭಿಸುತ್ತದೆ.

## ೨ ಏಕೀಭಾವ ಸ್ತೋತ್ರ.

ಓ ಜಿನ ಸೂರ್ಯನೆ! ಆತ್ಮನೊಡನೆಯೇ ಬೆಳೆದು ಬಂದಂಥ-ಭವಬಂಧನಕ್ಕೆ ಕಾರಣವಾದಂಥ ಕರ್ಮವೇ ನಿನ್ನ ಭಕ್ತಿಯಿಂದ ನಷ್ಟವಾಗುವಲ್ಲಿ ಉಳಿದ ದುಃಖ ಓಡದೆ ಹೇಗೆ ನಿಂತೀತು? ಜ್ಯೋತಿ ರೂಪನಾದ ನಿನ್ನನ್ನು ಹೃದಯದಲ್ಲಿಟ್ಟು ಪೂಜಿಸಲು ಅಲ್ಲಿ ಕರ್ಮವೆಂಬ ಕತ್ತಲೆ ನಿಂತೀತೆ? ನಿಮ್ಮ ನಾಮಸ್ಮರಣೆಯೆಂಬಮಂತ್ರದಿಂದ ದೇಹವೆಂಬ ಹುತ್ತದಲ್ಲಿರುವ ವ್ಯಾಧಿಗಳೆಂಬ ಸರ್ಪಗಳು ಓಡಿ ಹೋಗುವವು. ಯಾರ ಜನ್ಮಕ್ಕೆ ಮುಂಚಿತವಾಗಿ ಸುರ ಸುವರ್ಣ ವೃಷ್ಟಿಯಿಂದ ಭೂಮಿಯೆಲ್ಲ ಬಂಗಾರ ಮಯವಾಯಿತೋ ಅಂತಹರ ಧ್ಯಾನದಿಂದ ನನ್ನ ಪಾಂಡು ರೋಗವು ಹೋಗಿ ನನ್ನ ಕಾಯ ಅಪರಂಜಿಯಂತಾದುದರಲ್ಲಿ ಆಶ್ಚರ್ಯವೇನು? ಲೋಕಕ್ಕೇ ಬಂಧುಗಳಾದ ನೀವು ನನ್ನ ಚಿತ್ತದಲ್ಲಿ ಇದ್ದೂ ನನ್ನ ಸಂಕಟ ಪರಿಹರಿಸದೆ ಹೇಗೆ ಇರುವಿರಿ? ಭವಕಾಂತಾರದಲ್ಲಿ ತಿರುಗಿ ಬಳಲಿ ಬಂದಾಗ ನನಗೆ ಜಿನವಾಣಿಯೆಂಬ ಸರೋವರ ಸಿಕ್ಕಿತು. ಅದರಲ್ಲಿಯೇ ಮುಳುಗಿರುವ ನನ್ನನ್ನು ತಿರುಗಿ ಭವಗಳಲ್ಲಿ ಹೇಗೆ ತೊಳಲಾಡಿಸುವಿರಿ? ಸಮವಸರಣ ಸಹಿತ ಪ್ರಯಾಣ ಮಾಡುವಾಗ ನೀವು ಪಾದ ಇಟ್ಟಲ್ಲೆಲ್ಲ ಸುವರ್ಣ ಕಮಲ ನಿರ್ಮಿತವಾಗುವುದು. ಅಂದ ಮೇಲೆ ಸಂಪೂರ್ಣವಾಗಿ ನೀವೇ ನನ್ನ ಮನಸ್ಸಿನಲ್ಲಿ ನೆಲೆಗೊಂಡ ಮೇಲೆ ಇನ್ನೇನಾಗಲಿಕ್ಕಿಲ್ಲ? ಎಲ್ಲ ಶ್ರೇಯಸ್ಸು ಸಿಕ್ಕುವುದು.

ಓ ಜಿನನಾಥರೇ ! ನಿಮ್ಮ ದರ್ಶನದಿಂದ ಘೋರರೋಗಗಳೆಲ್ಲ ನಷ್ಟವಾಗುವವು. ಮಾನಸ್ತಂಭವೂ ಉಳಿದವುಗಳಂತೆ ಕಲ್ಲಿನದೇ ಆದರೂ ನಿಮ್ಮ ಸಾನಿಧ್ಯದಿಂದ ಅದಕ್ಕೆ ಮಾನವನ ಮಾನ ಕಷಾಯ ವನ್ನು ನಷ್ಟಗೊಳಿಸುವ ಸಾಮರ್ಥ್ಯ ಬಂದಿದೆ. ಅಂದ ಮೇಲೆ ನನ್ನ ಹೃದಯದಲ್ಲಿಯೇ ನೀವಿರುವಾಗ ನನ್ನಲ್ಲಿ ಯಾವದೋಷವೂ ಉಳಿಯಲು ತಕ್ಕದಿಲ್ಲ. ಜಿನನ ಮೈ ಸೋಂಕಿರ ಗಾಳಿ ತಗಲಿದರೆ ಎಲ್ಲ ರೋಗ ಹೋಗುವವು. ಅಂದ ಮೇಲೆ ಜಿನ ಭಕ್ತನಿಗೆ ಯಾವ ರೋಗ ಬಂದೀತು ! ಸರ್ವಜ್ಞರೇ ! ನಾನು ಭವಭವಗಳಲ್ಲಿ ಯಾವ ಕರ್ಮ ಮಾಡಿರುವನೆಂಬುದು ನಿಮಗೆ ಗೊತ್ತಿದೆ. ನಾನು ನಿಮ್ಮ ಭಕ್ತ. ನನ್ನನ್ನು ಉದ್ಧಾರಮಾಡುವುದು ನಿಮ್ಮನ್ನೇ ಕೂಡಿದೆ. ನಾಯಿಗೆ ಜೀವಂಧರನು ನಮೋಕಾರ ಮಂತ್ರವನ್ನು ಉಪದೇಶಿಸಿದಕ್ಕೆ ಅದು ದೇವಭವವನ್ನು ಹೊಂದಿತು. ನಾನು ಮಾನವ. ನಿಮ್ಮ ಧ್ಯಾನದಿಂದ ದೇವೇಂದ್ರನಾಗಲಾರೆನೆ ! ಜ್ಞಾನ ಚಾರಿತ್ರ್ಯಗಳಿದ್ದಾಗ್ಯೂ ಮುಕ್ತಿಯ ಬಾಗಿಲದ ಬೀಗದ ಕೈಯು ಜಿನ ಭಕ್ತಿಯೇ ಆಗಿದೆ. ಜಿನವಾಣಿ ಯಿಂದಲೇ ತತ್ವಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದಬೇಕೇ ಹೊರತಾಗಿ ಮಿಥ್ಯಾದೇವ ಗುರು ಶಾಸ್ತ್ರಗಳಿಂದ ತಕ್ಕದಿಲ್ಲ.

ಜಿನೇಶ್ವರನು ಅನಂತಜ್ಞಾನ ಸುಖಗಳ ನಿಧಿಯು. ಇದನ್ನು ನಮ್ಮ ಕರ್ಮವೆಂಬ ಭೂಮಿಯು ಮುಚ್ಚಿರುತ್ತದೆ. ಇದನ್ನು ತೆರೆಯ ಲಿಕ್ಕೆ ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶಗಳೆಂಬ ನಾಲ್ಕು ಗುದ್ದಲಿ ಗಳನ್ನು ಆತ್ಮನು ಹಿಡಿಯಲಿಕ್ಕೆಬೇಕು. ಅವನೇ ಭಕ್ತನು. ಸ್ಯಾದ್ವಾದ ನ್ಯಾಯವೆಂಬ ಹಿಮಗಿರಿಯಲ್ಲಿ ಭಕ್ತಿ ಗಂಗೆ ಜನಿಸಿ ಆನಂದ ಸಮು ದ್ರಕ್ಕೆ ಕೂಡುತ್ತಾಳೆ. ಅದರಲ್ಲಿ ನಾನು ಮಿಂದು ಪರಿಶುದ್ಧನಾಗಿ ದ್ದೇನೆ. ಜಿನನೇ ನಿನ್ನನ್ನು ಭಜಿಸುವ ನಾನು ಹಾಗೂ ನೀನು ಇಬ್ಬ ರಲ್ಲಿಯೂ ಭೇದವಿಲ್ಲ. ನಿರ್ವಿಕಲ್ಪಕ ಸ್ಥಿತಿಯಿದೆ. ಈ ಭಾವನೆಯೂ ನನ್ನನ್ನು ಸಿದ್ಧಿಗೆ ಮುಟ್ಟಿಸುವುದು. ತಮ್ಮ ವಾಕ್ಯವೆಂಬ ಸಾಗರವನ್ನು ದೇವತೆಗಳು ವಿದ್ವಾಂಸರು ಕಡೆದರು. ಅದರಲ್ಲಿ ಜನಿಸಿದ ಅಮೃತ ಸೇವನೆಯಿಂದ ಮುಕ್ತಿಲಭಿಸುವುದು. ಸ್ವಭಾವತಃ ಸುಂದರನಲ್ಲ

ವನು ಸುಂದರ ತೊಡಿಗೆ ಧರಿಸಲು ಬಯಸುವನು. ಅನ್ಯರಿಗೆ ೇಲುವೆನೆಂಬ ಹೆದರಿಕೆಯುಳ್ಳವನು ವಸ್ತ್ರಧರಿಸುವನು. ನಿಮಗೆ ವುಗಳ ಅಗತ್ಯವಿಲ್ಲ. ನಿಮ್ಮ ಜಾತರೂಪ ಆಕಾರವೇ ವೀತರಾಗ ವನ್ನು ಪ್ರದರ್ಶಿಸುವುದು. ಇಂದ್ರನು ತೀರ್ಥಂಕರರ ಪೂಜೆ ಾಡುವದರಿಂದ ತೀರ್ಥಂಕರರಿಗೆ ಶ್ರೇಷ್ಠತೆ ಬರುವದಿಲ್ಲ. ಇಂದ್ರ ೀ ಭವಬಂಧನ ನಷ್ಟವಾಗಿ ಹಿರಿಮೆ ಒದಗುವದು. ಮರವ ಎಲೆ ಸು ಮನುಷ್ಯನನ್ನು ನೆರಳಲ್ಲಿ ಕರೆದು ಕೂಡಿಸಿ ಸಂತೋಷ ಪ್ಪುಂಟು ಮಾಡುವದಿಲ್ಲ. ಅಲ್ಲಿ ಹೋಗಿ ಕುಳಿತವನು ತನ್ನಷ್ಟಕ್ಕೆ ನೇ ಸಂತೋಷ ಹೊಂದುವನು. ಅದರಂತೆ ಜಿನೇಶ್ವರರ ಸ್ತೋತ್ರ ಾಡುವದರಿಂದ ಜಿನೇಶ್ವರ ನಮಗೆ ವರ ಕೊಡುವದಿಲ್ಲ. ಅದು ಷ್ಟಕ್ಕೆ ತಾನೇ ಲಭಿಸುವದು.

ಓ ದೇವನೇ! ನಿನಗೆ ರಾಗದ್ವೇಷಗಳಿಲ್ಲ. ಆದರೂ ಜಗತ್ತು ಆಜ್ಞೆಗೆ ಬಗ್ಗಿ ಹೋಗುವದು. ಜಗತನ್ನು ಆಳುವಿ. ಇಷ್ಟೇ ಅಲ್ಲ ಸಮೋಸರದಲ್ಲಿ ಬಂದವರೂ ಕೂಡ ತಮ್ಮ ಪರಸ್ಪರ ವೈರ ನ್ನ ಕಳೆದು ಕೊಳ್ಳುವರು. ನಿನ್ನನ್ನು ಯಾವ ಬಯಕೆಯಿಂದ ರ ಭಜಿಸುವರೋ ಆ ಬಯಕೆ ಅವರಿಗೆ ಸಿದ್ಧಿಸುವದು. ಅನಂತ ರ್ಶನಜ್ಞಾನವೀರ್ಯ ಸುಖಗಳುಳ್ಳ ನಿನ್ನನ್ನು ಭಜಿಸುವವನು ಕ್ತಿಯನ್ನು ಪಡೆಯುವನು, ಪಂಚಕಲ್ಯಾಣ ನಾಯಕನಾಗು ು. ದೇವೇಂದ್ರರಿಂದ ಪೂಜೆಗೊಳ್ಳುವ ನಿನ್ನನ್ನು ಸ್ತುತಿಸಲು ವು ಅಸಮರ್ಥರು. ಆದರೂ ಈ ಸ್ವಲ್ಪ ಮಾತುಗಳಿಂದ ನಮ್ಮ ತ್ತಿಯನ್ನು ವ್ಯಕ್ತಪಡಿಸುತ್ತೇವೆ. ವೈಯಾಕರಣಿ ತಾರ್ತಿಕ ಕವಿ ರೆಲ್ಲರಿಗಿಂತ ವಾದಿರಾಜನು ಶ್ರೇಷ್ಠನಾಗಿದ್ದಾನೆ. ಈ ಸ್ತೋತ್ರ ಲ್ಲಿ ದೋಷ ಹುಡುಕುವ ಗೊಡವೆಗೆ ಹೋಗಬೇಡಿರಿ.

## ೪ ವಿಷಾಪಹಾರ.

ಆದಿಭಗವಂತರು ಅನಂತಜ್ಞಾನ ವೀರ್ಯಗಳುಳ್ಳವರು. ಬಹು ಲ ಬಾಳಿದರೂ ಮುಪ್ಪಿಲ್ಲದವರು. ಎಲ್ಲ ದೇವರಿಂದ ಪೂಜಿ

ತರು. ಇಂಥವರೂ ಎಲ್ಲರ ಕರ್ಮವನ್ನು ಕಳೆದು ರಕ್ಷಿಸಲಿ. ಆದಿಯಲ್ಲಿ ಜಗತ್ತಿಗೆ ಐಂದ್ರಿಕ ಸಮಸ್ತ ಭೋಗಗಳನ್ನು ಒದಗಿಸುತ್ತ ಬಂದಿದ್ದ ದಶಾಂಗಕಲ್ಪವೃಕ್ಷಗಳು ಕಾಲಮಹಿಮೆಯಿಂದ ನಷ್ಟವಾದವು. ಆಗ ಲೋಕಕ್ಕೆ ಆಯುಧ, ಅಕ್ಷರಜ್ಞಾನ, ಒಕ್ಕಲತನ, ವ್ಯಾಪಾರ, ವಿದ್ಯೆ, ಶಿಲ್ಪ, ಮೊದಲಾದವುಗಳನ್ನು ತಿಳಿಸಿದ ಆದಿ ಭಗವಂತರನ್ನು ಸ್ತುತಿಸುವೆ. ಅವರನ್ನು ಸ್ತುತಿಸುವದು ಅಜ್ಞರಿಗೆ ಅಸಾಧ್ಯ. ಆದರೂ ಸೂರ್ಯನಿಲ್ಲದ ಕತ್ತಲೆಯಲ್ಲಿ ದೀಪ ಬೆಳಕ ಬೀರುವಂತೆ ನಾನು ಈ ಸ್ತೋತ್ರವನ್ನು ಆರಂಭಿಸುತ್ತೇನೆ. ಒಂದು ಗವಾಕ್ಷದಿಂದ ದೊಡ್ಡ ಪರ್ವತವನ್ನು ಕಾಣುವಂತೆ ನನ್ನ ಅಲ್ಪ ಬುದ್ಧಿಯಿಂದ ನಿಮ್ಮ ಗುಣಗಳನ್ನು ವರ್ಣಿಸುವೆ. ಕೇವಲ ಜ್ಞಾನದಿಂದ ಮೂಲೋಕವನ್ನೇ ನೀವು ಕಾಣಬಲ್ಲಿರಿ. ಅಜ್ಞಮಾನವರು ನಿಮ್ಮನ್ನು ಕಾಣರು. ನಿಮ್ಮನ್ನು ಕಾಣಲು ನಾವು ಅಶಕ್ತರಾಗಿದ್ದೇವೆಂಬ ಹೇಳಿಕೆಯೇ ನಿಮ್ಮ ಸ್ತೋತ್ರವಾಗುವದು. ಜಗತ್ತಿನ ಜನರ ಭವರೋಗವನ್ನು ಬಿಡಿಸುವ ವೈದ್ಯರು ನೀವು. ಸೂರ್ಯ ದಿನಾಲು ಉದಯ ಹೊಂದುವನಾದರೂ ಲೋಕದ ಕಲ್ಯಾಣ ಅವನಿಂದ ಆಗದು. ನಿಮ್ಮ ದರ್ಶನವು ಒಂದು ಕ್ಷಣದಲ್ಲಿ ಲೋಕಕಲ್ಯಾಣ ಮಾಡುವುದು. ಭಗವಂತನೇ ನೀನು ಕನ್ನಡಿಯಂತೆ. ನೋಡುವವರ ಮುಖ ಹೇಗಿರುವದೋ ಹಾಗೆ ಕನ್ನಡಿಯಲ್ಲಿ ತೋರುವುದು. ಅದು ಏನು ಮಾಡಬಲ್ಲುದು! ಹಾಗೆಯೇ ಭಕ್ತರು ಎಂತಿರುವರೊ ಅಂತೆಯೇ ಫಲಸಿಕ್ಕುವದು. ಆಳ ಎತ್ತರ ವೈಶಾಲ್ಯಗಳು ಸಮುದ್ರ ಪರ್ವತ ಭೂಮಿಗಳಿಗೆ ಸ್ವಾಭಾವಿಕ ಧರ್ಮವಾಗಿರುವಂತೆ ಗಾಂಭೀರ್ಯ ಉತ್ಕೃಷ್ಟತೆ, ತ್ರಿಲೋಕವ್ಯಾಪಕತೆಗಳು ತೀರ್ಥಂಕರರ ಸ್ವಭಾವ ಗುಣಗಳಾಗಿವೆ. ಕರ್ಮ ಬದ್ಧರಾದ ಸಂಸಾರೀ ಜೀವಿಗಳ ರೀತಿಯನ್ನು ತ್ಯಜಿಸಿ, ನಿತ್ಯ ನಿರ್ಬಾಧ ನಿರುಪಮ ಸುಖರೂಪವಾದ ಮೋಕ್ಷ ಪದವಿಯನ್ನು ಪಡೆದಿರುವಿರಿ. ಕಾಮನನ್ನು ಉರುಹಿದ ಶಿವ, ಲಕ್ಷ್ಮೀಪತಿಯಾದ ವಿಷ್ಣು, ಶಂಭು, ಮೊದಲಾದ ನಾಮಗಳು ನಿನಗೇ ಅನ್ವಯಿಸುತ್ತವೆ. ಕೆರೆ ಬಾವಿ ಸರೋವರಗಳಲ್ಲಿ ಸ್ವಲ್ಪ ನೀರಿರುತ್ತ

ದೆಂದು ಹೇಳಿದ ಮಾತ್ರಕ್ಕೆ ಸಮುದ್ರದ ಹಿರಿಮೆ ವ್ಯಕ್ತವಾಗುವದಿಲ್ಲ. ಅದರ ದೊಡ್ಡಸ್ತನ ಅದಕ್ಕಿರುತ್ತದೆ. ಅದರಂತೆ ಅನ್ಯ ದೈವಗಳನ್ನು ನಿಂದಿಸಿ ನಿನ್ನನ್ನು—ನಿನ್ನ ಮಹಿಮೆಯನ್ನು ವ್ಯಕ್ತಪಡಿಸಬೇಕಾಗಿಲ್ಲ. ಅದು ಸ್ವತಸ್ಸಿದ್ಧವಾಗಿದೆ. ನಾವೆಯನ್ನು! ಅಂಬಿಗನು ದಡವನ್ನು ಮುಟ್ಟಿಸುತ್ತಾನೆ; ನಾವೆಯು ಅಂಬಿಗನನ್ನು ದಡವನ್ನು ಸೇರಿಸುತ್ತದೆ. ಹಾಗೆಯೇ ಆತ್ಮವು ಕರ್ಮವನ್ನು ಮಾಡುತ್ತದೆ. ಆ ಕರ್ಮದ ಫಲದಂತೆ ಅದಕ್ಕೆ ಗತಿಯುಂಟಾಗುತ್ತದೆ. ಜನತೆ ದೋಷಾಚರಣೆಮಾಡಿ ಅದರಿಂದ ಸುಖ ಬಯಸುತ್ತಿದೆ. ಇದು ಮಳಲಿನಿಂದ ಎಣ್ಣೆ ತೆಗೆದುಕೊಳ್ಳಲು ಪ್ರಯತ್ನಿಸಿದಂತೆ.

ವಿಷ ಪರಿಹಾರಕ್ಕೆ ಮಣಿ ಮಂತ್ರ ಔಷಧಗಳೇ ಉಪಾಯವೆಂದು ತಿಳಿಯುತ್ತಾರೆ. ಅದಕ್ಕಿಂತಲೂ ಹೆಚ್ಚಾಗಿ ಅರ್ಹಂತನ ಸ್ತೋತ್ರವು ಉಪಯುಕ್ತವಾಗಿದೆ. ಇವರು ಭಕ್ತರು ಇವರು ಭಕ್ತರಲ್ಲ ಎಂಬ ಭೇದ ದೃಷ್ಟಿ ಜಿನನಲ್ಲಿ ಇಲ್ಲ. ಲೋಕದಲ್ಲಿ ತ್ರಿಕಾಲ ತ್ರಿಲೋಕ ಜ್ಞಾನವು ತೀರ್ಥಂಕರರಿಗಷ್ಟೇ ಇರುತ್ತದೆ. ಕೊಡೆಯನ್ನು ಹಿಡಿದುಕೊಳ್ಳುವುದರಿಂದ ಸೂರ್ಯನಿಗೆ ಉಪಕಾರವಲ್ಲ. ನಮಗೆ ಹಿತ. ಅದರಂತೆ ಇಂದ್ರ ಅರಹಂತನನ್ನು ಪೂಜಿಸುವುದು ಅರಹಂತನ ಹಿತಕ್ಕಲ್ಲ. ತನ್ನ ಉದ್ಧಾರಕ್ಕಾಗಿಯೇ ಇರುತ್ತದೆ. ಜಿನೇಶ್ವರರು ಎಲ್ಲರಿಗೂ ಬೇಕಾದ ಸಂಸಾರ ಸುಖವನ್ನೇ ತ್ಯಜಿಸಲು ಹೇಳುವರು. ಅಂಥ ವೈರಾಗ್ಯದ ಮಾತನ್ನೂ ಜನರು ಪ್ರೀತಿಸುವರು. ಇದು ಆಶ್ಚರ್ಯಕರವಾದುದು. ಅಂದ ಮೇಲೆ ನಿಮ್ಮ ಗುಣ ವಿಮರ್ಶೆ ಮಾಡುವದು ತಕ್ಕುದೆ ?

ನೀರಿಲ್ಲದ ಪರ್ವತ ಶಿಖರದಲ್ಲಿಯೇ ನದಿಯು ಹುಟ್ಟುವುದೇ ಹೊರತಾಗಿ ಸಮುದ್ರದಲ್ಲಿ ಅಲ್ಲ. ಅದರಂತೆ ಸಕಲೈಶ್ವರ್ಯವನ್ನು ತ್ಯಜಿಸಿದಂಥ ನಿಮ್ಮಿಂದಲೇ ಲೋಕಕಲ್ಯಾಣವಾಗುವುದು. ವೈಭವದ ಇಂದ್ರರಿಂದಲ್ಲ. ಇಂದ್ರ ತೀರ್ಥಂಕರರ ದ್ವಾರಪಾಲಕ. ಅದೊಂದು ಅವರ ಪ್ರಾತಿಹಾರ್ಯ. ಇದು ತೀರ್ಥಂಕರರ ಗುಣಕ್ಕೆ ಯುಕ್ತವಾದುದೇ ಆಗಿರುತ್ತದೆ. ಕತ್ತಲೆಯಲ್ಲಿರುವವನು ಬೆಳಕಿನಲ್ಲಿರುವವನನ್ನು

ಕಾಣುತ್ತಾನೆ. ಅದೇ ಕತ್ತಲೆಯಲ್ಲಿರುವವ ಬೆಳಕಿನಲ್ಲಿರುವವರಿಗೆ ಕಾಣುವದಿಲ್ಲ. ಸಮ್ಯಕ ದರ್ಶನಜ್ಞಾನ ಚಾರಿತ್ರ್ಯ ಉಳ್ಳವನು ಬೆಳಕಿನಲ್ಲಿ ಇದ್ದವನು. ತಮ್ಮ ಬೆಳವಣಿಗೆ, ಉಸುರಾಟ, ರೆಪ್ಪೆಹೊಡೆಯುವಿಕೆ ಮುಂತಾದ ಬಹಿರಂಗವನ್ನೇ ಕಾಣದ ಜನತೆ ಶುದ್ಧ ಆತ್ಮತತ್ವವನ್ನು ತಿಳಿಯುವುದು ಸುಲಭವಲ್ಲ. ಇಹದಲ್ಲಿಯ ತಂದೆ ತಾಯಿ ಕುಲಗಳನ್ನೇ ಹೇಳುತ್ತ ತಿರಗುವವರು ನಿತ್ಯ ಆತ್ಮಸ್ವರೂಪವನ್ನು ಏನು ಅರಿಯುವರು? ಬಲಿಷ್ಠರನ್ನು ವಿರೋಧಿಸುವುದು ತನ್ನ ನಷ್ಟಕ್ಕೇ ಕಾರಣ. ಮೋಹವು ಸುರಾಸುರರನ್ನು ಗೆದ್ದೆನೆಂದು ನಿನ್ನ ವಿರುದ್ಧನಿಂತರೆ ಉಳಿದೀತೆ? ಎಲ್ಲದಕಿಂತ ಶ್ರೇಷ್ಠವಾದ ಧರ್ಮ ಮಾರ್ಗವನ್ನು ಶೋಧಿಸಿ ತೆಗೆದ ತೀರ್ಥಂಕರರಿಗೆ ಅದರ ಬಗ್ಗೆ ಸ್ವಲ್ಪವೂ ಹೆಮ್ಮೆಯಿಲ್ಲ- ನಾವು ಏನಾದರೂ ಒಂದು ಸಣ್ಣ ಕೆಲಸ ಮಾಡಿದರೆ ಹೆಮ್ಮೆಪಡುತ್ತೇವೆ.

ಸೂರ್ಯನಿಗೆ ರಾಹು, ಬೆಂಕಿಗೆ ನೀರು, ಸಮುದ್ರಕ್ಕೆ ಗಾಳಿ, ಸಂಸಾರಕ್ಕೆ ವಿಯೋಗಗಳು ವಿಘಾತಕ್ಕೆ ಕಾರಣವಾದುವು. ತೀರ್ಥಂಕರಿಗೆ ವಿಘಾತಕವೆಂಬುದೇ ಇಲ್ಲ. ರತ್ನವನ್ನು ಹವಳವೆಂದು ತಿಳಿದು ಧರಿಸಿದ ಮನುಷ್ಯನು ಹವಳವನ್ನು ರತ್ನವೆಂದು ತಿಳಿದು ಧರಿಸಿದ ಮನುಷ್ಯನಿಗಿಂತ ಶ್ರೇಷ್ಠನು. ಅದರಂತೆ ಅರಹಂತನ ಗುಣಗಳನ್ನರಿಯದೆ ಸ್ತುತಿಸುವ ಮನುಷ್ಯನು ಅನ್ಯ ದೇವರ ಗುಣಗಳನ್ನರಿತು ಭಜಿಸುವವನಿಗಿಂತ ಶ್ರೇಷ್ಠನು. ದೇವನು ಪ್ರಕಾಶಮಾನವಾಗಿರುವನು. ಜ್ವರಬಂದಾಗ ಸ್ವರಕೆಟ್ಟ ಮಾನವನ ಸ್ವರವು ಜ್ವರ ಇಳಿದ ಮೇಲೆ ಒಳ್ಳೇಯದಾಗುವದು. ಹಾಗೆಯೇ ವ್ಯವಹಾರನಯದಿಂದ ಜೈನ ಸಿದ್ಧಾಂತದಲ್ಲಿ ಸಂಶಯವನ್ನು ತೆಗೆಯುವವನು ನಿಶ್ಚಯನಯಕ್ಕೆ ಬಂದಾಗ ಸಮಾಧಾನವನ್ನು ಹೊಂದುವನು. ಸಮುದ್ರವನ್ನು ಉಕ್ಕೇರಿಸುವೆನೆಂದೇನೂ ಚಂದ್ರ ಉದಯಿಸುವದಿಲ್ಲ. ಅದರೆ ಆವನ ಉದಯದಿಂದ ಸಾಗರ ಉಕ್ಕೇರುವುದು. ಹಾಗೆಯೇ ಭಕ್ತನ ದಾನ ಶೀಲಾದಿಗುಣಗಳಿಗೆ ಫಲಕೊಡಬೇಕೆಂದೇನೂ ತಾವು ಇಚ್ಛೆಮಾಡಿರುವದಿಲ್ಲ. ಅವರವರ ಕರ್ಮದ ಫಲ ಅವರಿಗೆ ಸಿಕ್ಕುತ್ತದೆ. ತೀರ್ಥಂಕ

ರರ ಗುಣಗಳು ಅನಂತ ಎಂದು ಹೇಳಿ ಬಿಟ್ಟರೆ ಸ್ತುತಿಯು ತೀರಿ ದಂತಾಯಿತು. ಹೆಚ್ಚಿಗೆ ವಿವರಿಸಲಿಕ್ಕೆ ಮಾನವನು ಶಕ್ತನಲ್ಲ.

ಸಾಧನೆಯಿಲ್ಲದೆ ಫಲ ಸಿಕ್ಕುವದಿಲ್ಲ. ಅತೀಂದ್ರಿಯ ಸುಖದ ಸಾಧನೆಗಳು ತೀರ್ಥಂಕರ ಸ್ತುತಿಗಳೇ ಆಗಿವೆ. ಪರಂಜ್ಯೋತಿ, ಮೂ ಲೋಕದೊಡೆಯ, ಪುಣ್ಯಪಾಪರಹಿತ, ಅನ್ಯರ ಪುಣ್ಯಕಾರಣ, ಅನ್ಯರಾರಿಗೂ ವಂದಿಸದವ, ಇವನೇ ತೀರ್ಥಂಕರನು. ನಾವು ಪಂಚೇಂದ್ರಿಯಗಳಿಂದ ಅರಿತುಕೊಳ್ಳುವಂತಹ ಗುಣಗಳು ಅರಹಂತ ನಲ್ಲಿ ಇಲ್ಲ. ಅವನ ರೂಪ ವಿಲಕ್ಷಣ. ಅಪರಿಚ್ಛಿನ್ನ ಜ್ಞಾನಾನಂದ ಸ್ವರೂಪ, ಅನಂತ, ಪರಿಪೂರ್ಣ, ವೈರಾಗ್ಯನಿಧಿ ತತ್ವವೇತ್ತ ಆದಂಥ ಜಿನನಿಗೆ ಶರಣು ಹೋಗುವೆ. ಮೇರು ಪರ್ವತ ಮೊದಲು ಮೊರಡಿ ಯಿದ್ದು ಆ ಮೇಲೆ ದಿನದಿನಕ್ಕೆ ಬೆಳೆದು ಹಿರಿಯ ಪರ್ವತವಾಗಲಿಲ್ಲ ಜನ್ಮತಃ ಹಿರಿಯದಾಗಿಯೇ ಇದೆ. ಅದರಂತೆ ವರ್ಧಮಾನನೆಂಬ ಹೆಸರಿದ್ದರೂ ಬೆಳವಣಿಗೆಯ ಅವಸ್ಥೆಯಲ್ಲಿ ನೀನಿಲ್ಲ. ಸ್ವಯಂ ಪ್ರಕಾಶ ಜೀವನಿಗಿದೆ. ಅದು ಅನ್ಯರನ್ನು ನಾಶಮಾಡುವದಿಲ್ಲ, ಅನ್ಯ ರಿಂದ ನಷ್ಟವಾಗುವದಿಲ್ಲ. ಜಿನನಿಗೆ ಶರಣು ಹೋಗುವದರಿಂದ ನನಗೆ ಸುಖವಾಗುವುದು. ಕೇವಲ ಅವನನ್ನು ಸ್ತುತಿಸುವುದ ರಿಂದಲ್ಲ. ಗಿಡದ ನೆರಳನ್ನು ನೋಡಿ ದೂರ ಬಿಸಲಲ್ಲಿ ನಿಂತು ಹಾಗೆ ಹೀಗೆ ಎಂದು ಹೊಗಳಿದರೆ ತಂಪಾದೀತೆ ? ಜಿನನೇ ನಿನ್ನಲ್ಲಿಯೇ ನನ್ನ ಬುದ್ಧಿ ನೆಲಸಿರುವಂತಾಗಲಿ. ಎಂದು ಧನಂಜಯ ಕವಿಯು ಅರಹಂತ ಪರಮೇಶ್ವರರನ್ನು ಪ್ರಾರ್ಥಿಸುತ್ತಾನೆ.

## ೫ ಭೂಪಾಲ ಸ್ತೋತ್ರ.

ಜಿನೇಶ್ವರನು ಮೋಕ್ಷ ಲಕ್ಷ್ಮಿಯ ಆಶ್ರಯಸ್ಥಾನನು. ಸರಸ್ವತಿಗೆ ಕ್ರೀಡಾಗೃಹ. ಕಲ್ಪವೃಕ್ಷದ ಚಿಗರಿನಂತೆ ಸುಕುಮಾರ. ಕೀರ್ತಿ ಸಂತೋಷಗಳಿಗೆ ಮೂಲಾಧಾರ. ಇಂತಹ ಜಿನೇಂದ್ರನ ಪಾದದರ್ಶನ ಮಾಡುವವರಿಗೆಸಮಸ್ತ ಶ್ರೇಯಸ್ಸೂ ದೊರೆಯುವದು. ಅರಹಂತನು ಎಲ್ಲರಿಗೂ ಶಾಂತಿಯನ್ನು ಕೊಡುವಂತಹನು. ಅವನ ಕಂಠಕ್ಕೆ

ಆನಂದವನ್ನು ಒದಗಿಸುವಂತಹದು. ಚಾರಿತ್ರ್ಯವು ಎಲ್ಲರಿಗೂ ಉಪಕಾರ ಮಾಡುವಂತಹದು. ಆದುದರಿಂದ ಅವನು ಸಂಸಾರವೆಂಬ ಮರಳು ಗಾಡಿನೊಳಗಿನ ವಿಶಾಲವೃಕ್ಷದಂತೆ ಎಂದು ಹೇಳುವುದು. ಭಗವಂತನು ಜೀವಿಗಳೆಂಬ ಕನ್ನೈದಿಲೆಗೆ ಚಂದ್ರನಿದ್ದಂತೆ. ದೇವಾ ನಿಮ್ಮ ದರ್ಶನದಿಂದ ನಾನು ತಾಯಿಯ ಗರ್ಭವೆಂಬ ಕತ್ತಲೆ ಕೋಣೆಯಿಂದ ಹೊರಗೆ ಬಂದೆ. ನಿನ್ನ ಸ್ತುತಿಯಿಂದ ನನ್ನ ಜನ್ಮ ಸಾರ್ಥಕವಾಗುವುದು. ಸರ್ವಜ್ಞನೆ ದೇವೇಂದ್ರರ ಕಿರೀಟ ರತ್ನ ಪ್ರಭೆಯಿಂದ ಬೆಳಗುವ ನಿಮ್ಮ ಸಿಂಹಾಸನವೆಲ್ಲಿ ? ಆ ವೈರಾಗ್ಯವೆಲ್ಲಿ? ನಿಮ್ಮ ಮಹಾತ್ಮೆಯನ್ನು ಊಹಿಸಲಾದರೂ ಶಕ್ಯವಿದೆಯೇ ? ದೇವೇಂದ್ರನೇ ಅಧೀನನಾಗಿರುವಲ್ಲಿ ಈ ರಾಜ್ಯ ಸಂಪತ್ತು ನಿನಗೆಷ್ಟರದು. ಮೋಹನೀಯ ಕರ್ಮನಷ್ಟವಾದುದರಿಂದ ನಿನಗೆ ತ್ರೀಲೋಕ ದರ್ಶನ ವುಂಟಾಗಿದೆ. ಶ್ರದ್ಧಾಪೂರ್ವಕ ನಿಮ್ಮ ದರ್ಶನ ತಕ್ಕೊಳ್ಳುವದರಿಂದ ದಾನ ಪೂಜಾ ತಪಸ್ಸಿನ ಫಲವು ದೊರಕುತ್ತದೆ.

ಜಿನೇಶ್ವರನ ಗುಣಶ್ರವಣದಲ್ಲಿ ಶ್ರದ್ಧೆಯಿಟ್ಟು ಬಾಳುವವನು ಲೋಕದ ಜನರಿಂದ ಹೊಗಳಿಸಿಕೊಳ್ಳುವನು. ಆತ್ಮ ಕಲ್ಯಾಣ ಮಾಡಿಕೊಳ್ಳುವನು. ಮುಕ್ತಿಯೆಂಬ ಸ್ತ್ರೀಯು ತರುಣಿ. ಅವಳ ಚಲಿಸುವ ನಯನಗಳಂತೆ ಜಿನೇಶ್ವರನಿಗೆ ಎರಡೂ ಕಡೆಗೆ ಸುರ ರಮಣಿಯರ ಚಾಮರ ಬೀಸಲಿವೆ. ಅಂತರಂಗ ಬಹಿರಂಗ ಲಕ್ಷ್ಮೀಪತಿಯಾತ. ಎಂಟು ಪ್ರಾತಿಹಾರ್ಯ ಉಳ್ಳ ಜಿನನು ನಮ್ಮನ್ನು ರಕ್ಷಿಸಲಿ. ತೀರ್ಥಂಕರರ ಪಂಚಕಲ್ಯಾಣಗಳಿಗೆ ದೇವತೆಗಳು ಹರ್ಷದಿಂದ ಗುಂಪುಗೂಡಿ ಬರುವರು. ವೀತರಾಗ ಪರಮೇಶ್ವರನ ದರ್ಶನ ಮಾಡದ ಮಾನವನು ಕಣ್ಣಿದ್ದೂ ಕುರುಡನು. ಜಿನದರ್ಶನದಿಂದಲೇ ಕಣ್ಣಿನ ಸಾಫಲ್ಯ. ವಿಷ್ಣು, ಬ್ರಹ್ಮ, ಶಿವರು ಕ್ರಮವಾಗಿ ಲಕ್ಷ್ಮಿ, ಸರಸ್ವತಿ, ಪಾರ್ವತಿ ಎಂಬ ಸ್ತ್ರೀಯರನ್ನು ಪ್ರೀತಿಸುತ್ತಾರೆ- ಆದರಿಂದ ಅವರು ಕಾಮನನ್ನು ಗೆದ್ದವರಲ್ಲ. ನೀನು ಸುರ ಸ್ತ್ರೀಯರ ದೃಷ್ಟಿ ಬಾಣಕ್ಕೂ ಸೋಲದವ. ಅದಕ್ಕಾಗಿ ನೀನೇ ಕಾಮ ವಿಜಯಿ. ಪೂರ್ವಜನ್ಮದ ಪುಣ್ಯದಿಂದಲೇ ಜಿನದರ್ಶನ ತೀರ್ಥ ಯಾತ್ರೆಗಳು ಮಾನವನಿಗೆ ಒದಗುತ್ತವೆ. ಸಂಸಾರವೆನ್ನುವಂತಹದು ಮೊದಲೇ

ಅರಣ್ಯವಿದ್ದಂತೆ; ಅದರಲ್ಲಿ ಕಾಮವಾಸನೆ ಕಾಡಕಿಚ್ಚು. ಇದನ್ನುಆರಿಸ ಲಿಕ್ಕೆ ಜಿನವಾಣಿಯೆಂಬ ಮಳೆಯೇ ಬೇಕು. ಚೈತ್ಯಾಲಯ ಪ್ರದರ್ಶನ ಜಿನದರ್ಶನಗಳಿಂದ ಒದಗುವ ಆನಂದವು ಮೋಕ್ಷದ ಆನಂದಕ್ಕೆ ಸಮಾನವು. ಜಿನನ ಪಾದಗಳ ಉಗುರಿನಲ್ಲಿ ಯಾವನು ತನ್ನ ಮುಖ ವನ್ನು ನೋಡಿಕೊಳ್ಳುವನೋ ಅವನಿಗೆ ಶುಭವಾಗುವದು. ಜಿನ ಮಂದಿರ ಒಂದು ಪರ್ವತದಂತೆ. ಅಲ್ಲಿ ನದಿಹುಟ್ಟಿದಂತೆ ಇಲ್ಲಿ ಸಂಪತ್ತು ಹುಟ್ಟುವದು. ಅಲ್ಲಿ ವೃಕ್ಷದ ಚಿಗುರಿದ್ದಂತೆ ಇಲ್ಲಿ ಧ್ವಜ ಇರುವವು. ಎಲ್ಲರಿಂದಲೂ ವಂದನೀಯನಾದ ಜನನ ಸರ್ವ ಶ್ರೇಷ್ಠನು. ನಿತ್ಯ ಮುಂಜಾನೆ ಜಿನದರ್ಶನ ಮಾಡುವದು ಸರ್ವೋತ್ಕೃಷ್ಟವಾದದ್ದು ಅರಹಂತನು ತಾಪಸಾಶ್ರಮದ ಗಿಣಿ, ಕವಿಗಳ ವನದ ಕೋಗಿಲ ಸಂಪತ್ತೆಂಬ ಮಲ್ಲಿಗೆ ಬಳ್ಳಿಗೆ ಭ್ರಮರ, ಶ್ರೇಷ್ಠ ಪುರುಷರ ಕಥಾ ಕಮಲಾಕರಕ್ಕೆ ಹಂಸಪಕ್ಷಿ, ಆದುದರಿಂದ ಎಲ್ಲರಿಗೂ ಜಿನನು ವಂದ್ಯನು. ಕೆಲವರು ಸ್ವರ್ಗ ಮೋಕ್ಷಗಳಿಗಾಗಿ ದೇಹದಂಡಿಸಿ ಕೊಳ್ಳುವರು. ಜಿನಭಕ್ತರು ಹಾಗಲ್ಲ.ಜಿನವಾಣಿಯ ಶ್ರದ್ಧೆಯಿಂದಲೇ ಅವುಗಳನ್ನು ಅವರು ಸಂಪಾದಿಸುವರು. ಅಲ್ಲ—ಅದರಲ್ಲಿಯೇ ಹೊಂದುವರು. ಅನೇಕ ದೇವದೇವೇಂದ್ರರು ತೀರ್ಥಂಕರರ ಸ್ತುತಿ ಮಾಡಿದರು. ತಮಗೆ ತಿಳಿದ ಸೇವೆ ಮಾಡಿದರು. ನಮಗೆ ಅಭಿಷೇಕ ಸೇವೆ ಹೇಗೆ ಒದಗೀತು? ತೀರ್ಥಂಕರರ ಜನ್ಮ ಕಾಲದಲ್ಲಿ ಸುರರು ಸುರ ಸ್ತ್ರೀಯರು ಆನಂದದಿಂದ ಅರ್ಚಿಸಿದ ಬಗೆಯನ್ನು ವರ್ಣಿಸಲು ಶಕ್ಯ ವಿಲ್ಲ. ರೆಪ್ಪೆಗಳನ್ನು ಹೊಡೆಯುವ ಕಣ್ಣುಳ್ಳ ನಾವು ಜಿನನ ದರ್ಶನ ಮಾಡಿದಾಗ ಆಗುವ ಆನಂದವನ್ನು ನಮಗೆ ಹೇಳಲಿಕ್ಕೆ ಸಾಧ್ಯವಿಲ್ಲ. ಅಂದ ಮೇಲೆ ರೆಪ್ಪೆಹೊಡೆಯದೆ ದರ್ಶನ ಮಾಡಿದ ದೇವತೆಗಳ ಆನಂದವನ್ನು ಹೇಗೆ ವರ್ಣಿಸಲಿ? ಜಿನಮಂದಿರದ ದರ್ಶನವೆಂದರೆ ಮುಕ್ತಿ ವಧುವಿನ ವಿವಾಹ ದರ್ಶನವಿದ್ದಂತೆ. ನಿತ್ಯ ನಿರ್ಮಲ ನಿರು ಪಮ ಸಹಜಾನಂದ ರೂಪರಾದ ಅರಹಂತರ ದರ್ಶನದಿಂದ ನಾನು ಧನ್ಯನಾದೆ. ಮತ್ತೆ ಮೇಲಿಂದಮೇಲೆ ಇಂಥ ದರ್ಶನ ಒದಗಲಿ. ಇದು ಭೂಪಾಲ ಕವಿಯ ಪ್ರಾರ್ಥನೆ.

# ಸ್ವಯಂಭೂಸ್ತೋತ್ರಂ
( ಚತುರ್ವಿಂಶತಿ ಜಿನಸ್ತುತಿಃ )

ವೃಷಭನಾಥರು ಆದಿತೀರ್ಥಂಕರರು. ಹದಿನಾಲ್ಕನೆಯ ಮನು ವೆನಿಸದ ನಾಭಿರಾಜನ ಮಕ್ಕಳು. ನಿರಂಜನ ಸ್ವರೂಪರು. ಜಗತ್ತಿನ ಜನರಿಗೆ ಕೃಷಿಯೇ ಮೊದಲಾದ ಜೀವನೋಪಾಯಗಳನ್ನು ಬೋಧಿಸಿದ ಮಹಾತ್ಮರು. ಮೇಲಾಗಿ ಮುಮುಕ್ಷುಗಳು. ಇವರು ನನ್ನ ಮೇಲೆ ಕೃಪೆದೋರಲಿ.

ಅಜಿತನಾಥ ತೀರ್ಥಂತರರು ಧರ್ಮ ತೀರ್ಥಸ್ವರೂಪರು. ಜಿತಾತ್ಮರು. ಮೋಕ್ಷಲಕ್ಷ್ಮಿಯನ್ನು ಸಂಪಾದಿಸಿದವರು. ನಮ್ಮ ಕಾರ್ಯ ಸಿದ್ಧಿಯಾಗಬೇಕಾದರೆ ಅಜಿತನಾಥರ ಹೆಸರನ್ನು ಮೊದಲು ನೆನೆಯಬೇಕು. ಅದು ಮಂಗಲನಾಮವು.

ಶಂಭವ ತೀರ್ಥಂಕರರು ಸುಖವನ್ನು ನೀಡುವಂತಹರು ಶಾಂತಿದಾಯಕರು. ಮಾನವನ ಅತೃಪ್ತ ಮನಸ್ಸೆಂಬ ರೋಗಕ್ಕೆ ವೈದ್ಯರಿದ್ದಂತೆ ಇರುವರು. ಸ್ಯಾದ್ವಾದಕ್ಕೆ ಒಡೆಯರು, ಮುಕ್ತಾತ್ಮರು. ಇಂಥವರನ್ನು ನೆನೆಯುವುದರಿಂದ ನಾವೂ ಶ್ರೇಷ್ಠರೆನಿಸುವೆವು.

ಅಭಿನಂದನರು ಗುಣದ ಖ್ಯಾತಿಯಿಂದ ಅಭಿನಂದನೀಯರಾದರು. ದಯೆಯೆಂಬ ವಧುವನ್ನು ವರಿಸಿದರು. ಹಸಿವೆಯೇ ಮೊದಲಾದದುಃಖಗಳನ್ನು ಕಳೆದವರು. ಇಂಥವರನ್ನು ನೆನಯಲು ನಮಗೆ ಒಳ್ಳೆಯ ಗತಿಯಾಗುವದು.

ಸುಮತಿ ಎಂಬ ಹೆಸರು ತೀರ್ಥಂಕರರಿಗೆ ಅನ್ವರ್ಥಕವಾಗಿದೆ. ಅನೇಕಾಂತದಲ್ಲಿ ಏಕತ್ವವನ್ನು ಕಾಣುವವದೇ ತತ್ವ. ಭೇದಾನ್ವಯ ಜ್ಞಾನವಂದೇ ಸತ್ಯ. ಇದನ್ನಾಚರಿಸಿದ ಸುಮತಿನಾಥರಿಗೆ ನಮಸ್ಕರಿಸುವೆ.

ಪದ್ಮಪ್ರಭ ತೀರ್ಥಂಕರರ ಪ್ರಭೆಯು ಬಾಲಸೂರ್ಯನಂತೆ ಹಬ್ಬಿದೆ. ಮನುಷ್ಯರು ದೇವತೆಗಳು ಎಲ್ಲರಿಂದಲೂ ತುಂಬಿದ ಸಭೆ

ಯ ಮೇಲೆ ಪ್ರಭಾವ ಬೀರುವಂತಹರು; ಸದ್ಗುಣ ಸಮುದ್ರರು. ಅಖಂಡ ಲಕ್ಷ್ಮೀ ಸರಸ್ವತಿಯರಿಬ್ಬರಿಗೂ ಒಡೆಯರು. ಅವರ ಪಾದ ಕಮಲಗಳು ಕಾಮನದರ್ಪವನ್ನು ಅಡಗಿಸಿವೆ. ಇಂತಹರಿಗೆ ವಂದಿಸುವೆ.

ಸುಪಾರ್ಶ್ವರು ಚಿತ್ತ ಸ್ವಾಸ್ಥ್ಯವುಳ್ಳವರು. ಸ್ವರ್ಗ ಭೋಗಗಳು ಕ್ಷಣ ಭಂಗುರವಾದವುಗಳು. ಆತ್ಮನು ನಿತ್ಯನು. ಇದನ್ನು ಬೋಧಿಸು ವಂತಹರು, ಅತುಲ ಶಕ್ತಿಯುಳ್ಳವರು. ನಿತ್ಯವಾದದ್ದನ್ನು ಸಾಖಕರ ವಾದದ್ದನ್ನು ಸಂಪಾದಿಸುವದಕ್ಕಾಗಿ ದೇವರಿಗೆ ನಮಸ್ಕಾರ ಮಾಡುವೆ.

ಚಂದ್ರಪ್ರಭತೀರ್ಥಂಕರರ ಪ್ರಭೆಯು ಜಗತ್ತಿನಲ್ಲಿ ಪ್ರತಿಚಂದ್ರ ನಂತೆ ಹಬ್ಬಿರುವುದು. ಕಷಾಯಗಳನ್ನು ಗೆದ್ದಂತಹರು. ವಾದಿಗಳಿಗೆ ಸಿಂಹದಂತೆ ಗಂಭೀರ ಧ್ವನಿಯುಳ್ಳವರು. ವಿಶ್ವವನ್ನೇ ಕಾಣುವ ದಿವ್ಯ ದೃಷ್ಟಿಯುಳ್ಳವರು. ಇಂತಹರನ್ನು ಮನಸ್ಸಿನಲ್ಲಿ ನೆನೆಯುವದರಿಂದ ನಾವು ಪವಿತ್ರರಾಗುವೆವು,

ಪುಷ್ಪದಂತ ತೀರ್ಥಂಕರರು ಏಕಾಂತದೃಷ್ಟಿಯುಳ್ಳವರು. ಅವರ ಸ್ವಭಾವ ಪ್ರಮಾಣಸಿದ್ಧವಾದುದು. ಅಂತರಂಗ ಬಹಿರಗಂದಲ್ಲಿ ಏಕ ಸ್ವರೂಪರಾದರು. ಸದ್ಗುಣ ಸಾಂದ್ರರು. ಜಗದೀಶ್ವರರು. ಅವರ ಗುಣಗಳನ್ನು ನಾನೂ ಪಡೆಯುವದಕ್ಕಾಗಿ ಅವರ ಪಾದಕಮಲಗಳಲ್ಲಿ ತಲೆಯನ್ನಿಡುವೆ.

ಶೀತ್ತಲನಾಥರು ಚಂದ್ರಕಿರಣ ಹಾಗೂ ಚಂದನಗಳಿಗಿಂತಲೂ ಶಾಂತಿಯನ್ನೀಯುವಂತಹರು. ಸುಖದ ಅಪೇಕ್ಷೆಯಿಂದ ಸುಟ್ಟು ಮೂರ್ಛೆಹೊಂದಿದವರಿಗೆ ಜ್ಞಾನಾಮೃತದ ಸಮುದ್ರವೇ ಇದ್ದಂತೆ ಇರುವದು. ಇವರಿಂದ ನಮ್ಮ ಮನಸ್ಸು ಶಾಂತಿಯನ್ನು ಹೊಂದಲೆಂದು ಪ್ರಾರ್ಥಿಸುವೆ.

ಶ್ರೇಯಾಂಸರು ಜಿನರು; ಅಜೇಯ ವಾಕ್ಯರು. ಸಂಸಾರವೆಂಬ ಆಕಾಶವನ್ನು ಬೆಳಗುವ ಸೂರ್ಯರು. ವಿಭೂತಿಗಳು. ದೃಷ್ಟಾಂತ ದಲ್ಲಿಯೂ ಸಿದ್ಧಾಂಥದಲ್ಲಿಯೂ ಇವರ ಕೂಡ ವಾದಹಾಕುವದು

ಅಸಾಧ್ಯವಾದುದು. ಕೈವಲ್ಯವಿಭೂತಿ ಸಾಮ್ರಾಟರರು. ಅದರಿಂದ ಇವರು ಪ್ರಾರ್ಥನೆಗೆ ಅರ್ಹರು.

ವಾಸುಪೂಜ್ಯರನ್ನು ನನ್ನ ಅಭ್ಯುದಯಕ್ಕಾಗಿ ಪೂಜಿಸುತ್ತೇನೆ. ಮೂವತ್ತುಜನ ಇಂದ್ರರು ಪೂಜಿಸುತ್ತಿರುವಾಗ ನನ್ನದು ಅಲ್ಪಪೂಜೆ. ಆದರೂ ಭಕ್ತಿಯಿಂದ ಕೂಡಿದುದು. ಮಾನವನ ಸ್ವಭಾವ ಮುಕ್ತಿಯನ್ನು ಪಡೆಯುವಂತಹದು. ಆ ಸ್ವಾಭಾವಿಕವಾದ ಗುಣಸಿದ್ಧಿಗೂ ಪ್ರಯತ್ನ ಬೇಕು. ಅದಕ್ಕಾಗಿ ಜಿನನನ್ನು ಸ್ತುತಿಸುವೆ.

ವಿಮಲ ತೀರ್ಥಂಕರರು ಸ್ವಪರ ಹಿತಸಾಧಕವಾದ ತತ್ವಜ್ಞಾನವನ್ನು ಉಪದೇಶಿಸಿದವರು. ಸಾಮಾನ್ಯರ ಬುದ್ಧಿಗೆ ನಿಲುಕುವಂತೆ ವಿಶೇಷ ವಿಷಯವನ್ನು ವಿವರಿಸಿದರು. ನನ್ನ ಹಿತದ ಆಶೆಯಿಂದ ಇವರಿಗೆ ನಮಿಸುವೆ.

ಅನಂತವಾದ ದೋಷಗಳನ್ನು ನಷ್ಟಪಡಿಸಿ ಅನಂತ ತೀರ್ಥಂಕರರೆಂದು ಹೆಸರು ಪಡೆದರ. ಬಹು ಮಹತ್ಮ್ಯವುಳ್ಳವರು. ಇವರಿಗೆ ವಂದಿಸುವೆ.

ಪಾಪರಹಿತವಾದಂಥ ಧರ್ಮತೀರ್ಥವನ್ನೇ ನಿರ್ಮಿಸಿದುದಕ್ಕೆ ಧರ್ಮತೀರ್ಥಂಕರರಾದರು. ದೇವ ಮಾನವರಿಂದ ಪೂಜನೀಯರೂ ಪ್ರಾತಿಹಾರ್ಯವಿಭವವುಳ್ಳವರೂ ಆದ ಇವರ ಪಾದಗಳಿಗೆ ಶಿರಬಾಗುವೆ.

ಚಕ್ರರತ್ನದಿಂದ ರಾಜನು ವೈರಿಗಳನ್ನು ಗದ್ದಂತೆ ಶಾಂತಿನಾಥರು ಸಮಾಧಿ ಚಕ್ರದಿಂದ ಮೋಹವನ್ನು ಗೆದ್ದರು. ದಯೆಯ ಪ್ರಕಾಶವನ್ನು ಬೀರುವಂತಹ ಧರ್ಮಚಕ್ರವನ್ನು ಹಿಡಿದು ದೇವಾದಿದೇವರಿಗೂ ರಾಜರೆನಿಸಿದರು. ಇಂಥವರನ್ನು ನನಗೆ ಶಾಂತಿದೊರೆಯಲೆಂದು ಶರಣು ಹೋಗುವೆ.

ಕುಂಥು ತೀರ್ಥಂಕರರು ಅಂತರ್ ಬಾಹ್ಯ ತಪಸ್ಸುಗಳೆರಡನ್ನೂ ಮಾಡಿದರು. ಕರ್ಮವನ್ನು ನಷ್ಟಗೊಳಿಸಿಕೊಂಡವರು. ಲೋಕಪಿತಾಮಹರು. ಇವರನ್ನು ಸ್ತುತಿಸುವೆ.

ಅರಹನಾಥ ತೀರ್ಥಂಕರರು ಚಕ್ರಲಾಂಛನ ಉಳ್ಳವರೂ, ತ್ಯಾಗಿಗಳೂ ಆಗಿದ್ದಾರೆ. ಇವರಿಗೆ ದಿವ್ಯಭಾಷೆಯಿದೆ. ನನ್ನ ಉದ್ಧಾರಕ್ಕಾಗಿ ಇವರನ್ನು ನೆನೆಯುವೆ.

ಮಲ್ಲಿ ತೀರ್ಥಂಕರಸ ಮಹಾಮುನಿಗಳು. ಇವರ ಪ್ರತಿಯೊಂದು ಮಾತುಗಳೂ ತತ್ವವನ್ನೇ ಬೋಧಿಸುತ್ತವೆ. ತಪಸ್ಸೆಂಬ ಅಗ್ನಿಯಿಂದ ಕರ್ಮವನ್ನು ದಹಿಸಿದರು. ಇವರಿಗೆ ಶರಣು ಹೋಗುವೆ.

ಚಿಕ್ಕೆಗಳ ಸಮೂಹಕ್ಕೆ ಚಂದ್ರನಿದ್ದಂತೆ ಮುನಿಸಂಘಕ್ಕೆ ಮುನಿಸುವ್ರತತೀರ್ಥಂಕರರು ಇರುವರು. ಚರಾಚರ ಜಗತ್ತಿನ ವಿಷಯಕ್ಕೆ ಸಂಪೂರ್ಣಜ್ಞಾನ ಉಳ್ಳವರು ಇವರು. ಭವದ ಶಾಂತಿಗಾಗಿ ಸ್ತುತಿಸುವೆ.

ಜಗತ್ತಿನಲ್ಲಿ ಅಹಿಂಸೆಯನ್ನು ಪಸರಿಸಿದವರು ನಮೀತೀರ್ಥಂಕರರು. ಬಹಳ ಕಾರುಣಿಕರು. ಶ್ರೇಷ್ಠರು. ಶಾಂತಿಯು ಮನೆ ಇದ್ದಂತೆ ಇರುವರು. ಇವರ ಆಶ್ರಯಕ್ಕೆ ಹೋಗುವೆ.

ನೇಮಿತೀರ್ಥಂಕರರು ಹರಿವಂಶದಲ್ಲಿ ಶ್ರೇಷ್ಠರು. ಶೀಲದಲ್ಲಿ ಸಮುದ್ರದಂತೆ ಇರುವರು. ವಿಪುಲ ಜ್ಞಾನಿಗಳು. ಮನಸ್ಸು ಪ್ರಸನ್ನವಾಗಲೆಂದು ಪ್ರಾರ್ಥಿಸುವೆ.

ಪಾರ್ಶ್ವರು ತ್ರಿಲೋಕಗಳಿಂದ ಪೂಜೆಗೊಳ್ಳುವರು. ಚಂಚಲವಾದ ಮನಸ್ಸನ್ನು ಹಿಡತದಲ್ಲಿ ಇಟ್ಟು ಕೊಂಡವರು. ತಪೋಧನರು ನನ್ನ ಮಿಥ್ಯಾದೃಷ್ಟಿಯು ನಷ್ಟವಾಗಲೆಂದು ಇವರ ಗುಣಗಳನ್ನು ಸ್ಮರಿಸುವೆ.

ವರ್ಧಮಾನ ತೀರ್ಥಂಕರರು ತಮ್ಮ ಗುಣದಿಂದ ಮಹಾವೀರರೆನಿಸಿಕೊಂಡರು. ಬಹಳ ಗುಣಸಂಪನ್ನರು. ಇವರ ಗುಣದಿಂದ ಜಿನಶಾಸನವು ವಿಭವಕ್ಕೇರಿತು. ಮೂಲೋಕದ ತುಂಬ ಕೀರ್ತಿಪಸರಿಸಿತು. ಮಹಾವೀರರು ಮಧುರ ವಚನ ಉಳ್ಳವರು. ಎಂದು ಸಮಂತಭದ್ರರು ಇಪ್ಪತ್ನಾಲ್ಕು ಜನ ತೀರ್ಥಂಕರರನ್ನು ಸ್ತುತಿಸುವರು.

---

# ದಶಭಕ್ತಿ

**ದಶಭಕ್ತಿಗೆ ಮುನ್ನುಡಿ ಬರೆಯುತ್ತ ಆಸ್ಥಾನ್ ವಿದ್ವಾನ್ ಎ ಶಾಂತಿರಾಜ ಶಾಸ್ತ್ರಿಗಳವರು ಈ ರೀತಿ ಬರೆಯುತ್ತಾರೆ.**

೧ ಸಿದ್ಧಭಕ್ತಿ, ೨ ಶ್ರುತಭಕ್ತಿ, ೩ ಚಾರಿತ್ರಭಕ್ತಿ, ೪ ಯೋಗಿಭಕ್ತಿ, ೫ ಆಚಾರ್ಯಭಕ್ತಿ, ೬ ನಿರ್ವಾಣಭಕ್ತಿ, ೭ ನಂದೀಶ್ವರಭಕ್ತಿ, ೮ ಚೈತ್ಯಭಕ್ತಿ, ೯ ಶಾಂತಿಭಕ್ತಿ, ೧೦ ಪಂಚಗುರುಭಕ್ತಿ ೧೧ ತೀರ್ಥಂಕರಭಕ್ತಿ, ೧೨ ಸಮಾಧಿಭಕ್ತಿಗಳೆಂದು ಸಂಖ್ಯಾಪೇಕ್ಷೆಯಿಂದ ಹನ್ನೆರಡಾದರೂ ಧಾರ್ಮಿಕಕ್ರಿಯಾಕಲಾಪಗಳಲ್ಲಿ ಹೆಚ್ಚಾಗಿ ಉಪಯೋಗಿಸಲ್ಪಡತಕ್ಕವುಗಳು ತೀರ್ಥಂಕರಭಕ್ತಿ ಸಮಾಧಿಭಕ್ತಿಗಳು ಹೊರತಾಗಿ ಉಳಿದ ಹತ್ತು ಭಕ್ತಿಗಳಾಗಿರುವುದರಿಂದ ರೂಢಿಯಲ್ಲಿ "ದಶಭಕ್ತಿ" ಯೆಂದು ಹೆಸರು ಬಂದಿದೆ.

ಭಕ್ತಿ ಶಬ್ದಕ್ಕೆ ಭಜನೆ— ಸೇವೆಯೆಂದರ್ಥವಾಗುವುದಾದರೂ ಇಲ್ಲಿ ಅಧ್ಯಾತ್ಮಿಕಸೇವೆಗೆ ನಿಮಿತ್ತಕಾರಣಗಳಾದ ಗ್ರಂಥಗಳಿಗೂ "ಕಾರಣೇಕಾರ್ಯೋಪಚಾರಃ" ಎಂಬ ನಿಯಮದಿಂದ "ಭಕ್ತಿಗಳು" ಎಂದು ಹೆಸರು ಬಂದಿದೆ. ಈ ಭಕ್ತಿಗಳನ್ನು ಅರ್ಥಜ್ಞಾನಪೂರ್ವಕವಾಗಿ ಪಠಿಸುವುದರಿಂದ ಎಷ್ಟೊಂದು ಮನಃಪ್ರಸನ್ನತೆಯುಂಟಾಗುವುದೆಂಬುದು ವಾಚಕರಿಗೆ ಸ್ವಾನುಭವಗೋಚರವಾಗುವದು.

## ದಶಭಕ್ತಿಗಳ ಪಠನಸಂದರ್ಭಗಳು

ಶಾಸ್ತ್ರಸ್ವಾಧ್ಯಾಯವನ್ನು ಪ್ರಾರಂಭಿಸುವಾಗ ಶ್ರುತಭಕ್ತಿಯನ್ನೂ ಆಚಾರಭಕ್ತಿಯನ್ನೂ ಆ ಶಾಸ್ತ್ರಸ್ವಾಧ್ಯಾಯವನ್ನು ಮುಗಿಸುವಾಗ ಶ್ರುತಭಕ್ತಿಯನ್ನೂ ಹೇಳಬೇಕು.

ಉಪವಾಸವ್ರತವನ್ನು ಕೈಕೊಂಡು ಆ ಅವಧಿಯು ಪೂರ್ತಿಯಾದನಂತರ ಅದನ್ನು ಬಿಡುವಾಗಲೂ ಎಂದರೆ ಆಹಾರವನ್ನು ತೆಗೆ

ದುಕೊಳ್ಳುವಾಗಲೂ ಆಹಾರಾನಂತರದಲ್ಲಿ ಪುನಃ ಆಹಾರ ಕಾಲದ ವರೆಗೆ ವ್ರತವನ್ನು ಕೈಕೊಳ್ಳುವಾಗಲೂ ಸಿದ್ಧಭಕ್ತಿಯನ್ನು ಪಠಿಸ ಬೇಕು. ಯೋಗಿಗಳು ಸಮೀಪದಲ್ಲಿದ್ದರೆ ಆಗ ಯೋಗಿಭಕ್ತಿ ಯನ್ನೂ ಪಠಿಸಬೇಕು.

ಚತುರ್ದಶಿಯಲ್ಲಿ ತ್ರಿಸಂಧ್ಯಾಕಾಲಗಳಲ್ಲಿ ದೇವವಂದನೆಯನ್ನು ಮಾಡುವಾಗ ಚೈತ್ಯಭಕ್ತಿ ಶ್ರುತಭಕ್ತಿ ಪಂಚಗುರುಭಕ್ತಿಗಳನ್ನು ಮತ್ತು ಸಿದ್ಧಭಕ್ತಿಯುನ್ನು ಪಠಿಸಬೇಕು.

ಆಷಾಢ ಕಾರ್ತಿಕ ಫಾಲ್ಗುನಮಾಸಗಳ ಶುಕ್ಲಪಕ್ಷಾಷ್ಟಮಿ ಯಿಂದ ಪೂರ್ಣಿಮೆಯ ವರೆಗೆ ಎಂಟೆಂಟು ದಿವಸ ನಂದೀಶ್ವರಾಷ್ಟಾಹ್ನಿಕಗಳಲ್ಲಿ ಸಿದ್ಧಭಕ್ತಿ ನುದೀಶ್ವರ ಭಕ್ತಿ ಪಂಚಗುರುಭಕ್ತಿ ಶಾಂತಿ ಭಕ್ತಿಗಳನ್ನು ಪಠಿಸಬೇಕು.

ಸಿದ್ಧಪ್ರತಿಮೆಯ ಮುಂದೆ ಸಿದ್ಧಭಕ್ತಿಯನ್ನೂ ತೀರ್ಥಂಕರರ ಜನ್ಮ ಕಲ್ಯಾಣದಲ್ಲಿಯೂ ಜಿನಪ್ರತಿಮೆಯ ಮುಂದುಗಡೆಯಲ್ಲಿಯೂ ಚೈತ್ಯಭಕ್ತಿ ಪಂಚಗುರುಭಕ್ತಿ ಶ್ರುತಭಕ್ತಿಗಳನ್ನು ಪಠಿಸಬೇಕು.

ದೇವದರ್ಶನ ದೇವಪೂಜೆ ತ್ರಿಕಾಲವಂದನೆ ಅಷ್ಟಮಿಯ ಕ್ರಿಯೆ ಇವುಗಳಲ್ಲಿ ಚೈತ್ಯಭಕ್ತಿ ಪಂಚಗುರುಭಕ್ತಿ ಶಾಂತಿಭಕ್ತಿಗಳನ್ನು ಪಠಿಸ ಬೇಕು.

ಅಭಿಷೇಕ ವಂದನಾಕ್ರಿಯೆಯಲ್ಲಿ ಸಿದ್ಧಭಕ್ತಿ ಚೈತ್ಯಭಕ್ತಿ ಪಂಚ ಗುರುಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು.

ಸ್ಥಿರಚರಬಿಂಬಪ್ರತಿಷ್ಠಾಕ್ರಿಯೆಗಳಲ್ಲಿ ಸಿದ್ಧಭಕ್ತಿ ಶಾಂತಿಭಕ್ತಿ ಗಳನ್ನೂ ಚರಬಿಂಬಪ್ರತಿಷ್ಠೆಯ ನಾಲ್ಕನೆಯ ಅಭಿಷೇಕವಂದನೆಯಲ್ಲಿ ಸಿದ್ಧಭಕ್ತಿ ಚೈತ್ಯಭಕ್ತಿ ಪಂಚಗುರುಭಕ್ತಿ ಶಾಂತಿಭಕ್ತಿಗಳನ್ನೂ ಸ್ಥಿರ ಬಿಂಬಪ್ರತಿಷ್ಠೆಯ ನಾಲ್ಕನೆಯ ಅಭಿಷೇಕ ವಂದನೆಯಲ್ಲಿ ಸಿದ್ಧಭಕ್ತಿ ಚಾರಿತ್ರಭಕ್ತಿಗಳನ್ನೂ ಪಠಿಸಬೇಕು.

ತೀರ್ಥಂಕರರ ಗರ್ಭಕಲ್ಯಾಣದಲ್ಲಿಯೂ ಜನ್ಮ ಕಲ್ಯಾಣದಲ್ಲಿಯೂ ಸಿದ್ಧಭಕ್ತಿ ಚಾರಿತ್ರಭಕ್ತಿ ಶಾಂತಿಭಕ್ತಿಗಳನ್ನೂ ಪರಿನಿಷ್ಕ್ರಮಣ

ಕಲ್ಯಾಣದಲ್ಲಿ ಸಿದ್ಧಭಕ್ತಿ ಚಾರಿತ್ರಭಕ್ತಿ ಯೋಗಿಭಕ್ತಿ ಶಾಂತಿಭಕ್ತಿಗಳನ್ನೂ ಕೇವಲ ಜ್ಞಾನಕಲ್ಯಾಣದಲ್ಲಿ ಸಿದ್ಧಭಕ್ತಿ ಶ್ರುತಭಕ್ತಿ ಚಾರಿತ್ರಭಕ್ತಿ ಯೋಗಿಭಕ್ತಿ ಶಾಂತಿಭಕ್ತಿಗಳನ್ನೂ ನಿರ್ವಾಣಕಲ್ಯಾಣದಲ್ಲಿ ಸಿದ್ಧಭಕ್ತಿ ಶ್ರುತಭಕ್ತಿ ಚಾರಿತ್ರಭಕ್ತಿ ಯೋಗಿಭಕ್ತಿ ನಿರ್ವಾಣಭಕ್ತಿ ಶಾಂತಿಭಕ್ತಿಗಳನ್ನೂ ಪಠಿಸಬೇಕು.

ಮಹಾವೀರ ಸ್ವಾಮಿಯ ನಿರ್ವಾಣಕಲ್ಯಾಣದ ದಿವಸ ಎಂದರೆ ಕಾರ್ತಿಕ ಬಹುಳ ಅಮಾವಾಸ್ಯೆಯ ಪ್ರಾತಃಕಾಲ,ಸಿದ್ಧಭಕ್ತಿ ನಿರ್ವಾಣಭಕ್ತಿ ಪಂಚಗುರುಭಕ್ತಿ ಶಾಂತಿಭಕ್ತಿಗಳನ್ನು ಪಠಿಸಿ ನಿತ್ಯವಂದನಾ ಕ್ರಿಯೆಯನ್ನು ಮಾಡಬೇಕು.

ಜ್ಯೇಷ್ಠ ಶುದ್ಧ ಪಂಚಮಿ ಎಂದರೆ ಶ್ರುತ ಪಂಚಮಿಯ ದಿವಸ ಸಿದ್ಧಭಕ್ತಿ ಶ್ರುತಭಕ್ತಿಗಳನ್ನು ಪಠಿಸಿ ಶ್ರುತಸ್ಕಂಧವನ್ನು ಸ್ಥಾಪಿಸಿ ಪೂಜಿಸಿ ಶ್ರುತಾವತಾರವನ್ನು ವಿವರಿಸಿ ಶ್ರುತಭಕ್ತಿ ಆಚಾರ್ಯಭಕ್ತಿಗಳನ್ನು ಪಠಿಸಿ ಆ ಶ್ರುತಪಂಚಮಿಯ ಕ್ರಿಯೆಯನ್ನು ಪೂರ್ತಿಮಾಡಬೇಕು. ಕೊನೆಯಲ್ಲಿ ಸಿದ್ಧಭಕ್ತಿ ಶ್ರುತಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು.

ಸಿದ್ಧಾಂತ—ಶಾಸ್ತ್ರವನ್ನು ಓದುವುದಕ್ಕೆ ಪ್ರಾರಂಭಿಸುವಾಗ ಸಿದ್ಧಭಕ್ತಿ ಶ್ರುತಭಕ್ತಿ ಆಚಾರ್ಯಭಕ್ತಿಗಳನ್ನೂ ಪ್ರತಿಯೊಂದು ಅರ್ಥಾಧಿಕಾರವನ್ನು ಪೂರ್ತಿಮಾಡುವಾಗ ಕಾಯೋತ್ಸರ್ಗವನ್ನು ಮಾಡಿ ಕೊನೆಯಲ್ಲಿ ಪುನಃ ಸಿದ್ಧಭಕ್ತಿ ಶ್ರುತಭಕ್ತಿ ಅಚಾರ್ಯಭಕ್ತಿಗಳನ್ನೂ ಪಠಿಸಬೇಕು.

ಸನ್ಯಾಸಮರಣದಲ್ಲಿ ಮೊದಲು ಆ ವ್ಯಕ್ತಿಯಲ್ಲಿ ಸನ್ಯಾಸವನ್ನು ಸ್ಥಾಪಿಸಿ ಸಿದ್ಧಭಕ್ತಿ ಶ್ರುತಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು. ಬಳಿಕ ಆ ವ್ಯಕ್ತಿಯಲ್ಲಿ ಸ್ವಾಧ್ಯಾಯವನ್ನು ಸ್ಥಾಪಿಸಬೇಕು. ಆಗ ಶ್ರುತಭಕ್ತಿ ಆಚಾರ್ಯಭಕ್ತಿಗಳನ್ನು ಪಠಿಸಬೇಕು. ಸನ್ಯಾಸಮರಣವನ್ನು ಹೊಂದುವ ವ್ಯಕ್ತಿಯ ಶುಶ್ರೂಷೆಯನ್ನು ಮಾಡುವವರು ಅವನ ಸಮೀಪದಲ್ಲಿದ್ದು ಕೊನೆಯಲ್ಲಿ ಸಿದ್ಧಭಕ್ತಿ ಶ್ರುತಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು.

ಸಾಮಾನ್ಯಋಷಿಯು ಮರಣವನ್ನು ಹೊಂದಿದರೆ ಆತನ ಶರೀರ ಸಂಸ್ಕಾರಕ್ರಿಯೆಯಲ್ಲಿಯೂ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಯೋಗಿಭಕ್ತಿ ಶಾಂತಿಭಕ್ತಿಗಳನ್ನೂ ಸಿದ್ಧಾಂತವೇತ್ತನಾದ ಮುನಿಯ ಶರೀರಸಂಸ್ಕಾರಕ್ರಿಯೆಯಲ್ಲಿಯೂ ಆತನ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಶ್ರುತಭಕ್ತಿ ಯೋಗಿಭಕ್ತಿ ಶಾಂತಿಭಕ್ತಿಗಳನ್ನೂ ಉತ್ತರ ಗುಣಗಳನ್ನು ಪಾಲಿಸುವ ಸಾಧುವಿನ ಶರೀರಸಂಸ್ಕಾರಕ್ರಿಯೆಯಲ್ಲಿಯೂ ಅವನ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಚಾರಿತ್ರಭಕ್ತಿ ಯೋಗಭಕ್ತಿ ಶಾಂತಿಭಕ್ತಿಗಳನ್ನೂ ಸಿದ್ಧಾಂತವೇತ್ತನೂ ಉತ್ತರಗುಣಗಳನ್ನು ಪಾಲಿಸುವವನೂ ಆದ ಸಾಧುವಿನ ಶರೀರಸಂಸ್ಕಾರಕ್ರಿಯೆಯಲ್ಲಿಯೂ ಅವನ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಯೋಗಿಭಕ್ತಿ ಆಚಾರ್ಯಭಕ್ತಿ ಶಾಂತಿಭಕ್ತಿಗಳನ್ನೂ ಸಿದ್ಧಾಂತವೇತ್ತರಾದ ಆಚಾರ್ಯರ ಶರೀರ ಸಂಸ್ಕಾರಕ್ರಿಯೆಯಲ್ಲಿಯೂ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಶ್ರುತಭಕ್ತಿ ಯೋಗಿಭಕ್ತಿ ಆಚಾರಭಕ್ತಿ ಶಾಂತಿಭಕ್ತಿಗಳನ್ನೂ ಉತ್ತರಗುಣಗಳನ್ನು ಪಾಲಿಸುವ ಆಚಾರ್ಯರ ಶರೀರ ಸಂಸ್ಕಾರಕ್ರಿಯೆಯಲ್ಲಿಯೂ ನಿಷದ್ಯಕಾಸ್ಥಾನದಲ್ಲಿಯೂ ಸಿದ್ಧಭಕ್ತಿ ಚಾರಿತ್ರಭಕ್ತಿ ಯೋಗಿಭಕ್ತಿ ಆಚಾರ್ಯಭಕ್ತಿ ಶಾಂತಿಭಕ್ತಿಗಳನ್ನೂ ಉತ್ತರಗುಣಗಳನ್ನು ಪಾಲಿಸುವವರೂ ಸಿದ್ಧಾಂತವೇತ್ತರೂ ಆದ ಆಚಾರ್ಯರ ಶರೀರಸಂಸ್ಕಾರಕ್ರಿಯೆಯಲ್ಲಿಯೂ ನಿಷದ್ಯಕಾಸ್ಥಾನಗಲ್ಲಿಯೂ ಸಿದ್ಧಭಕ್ತಿ ಶ್ರುತಭಕ್ತಿ ಯೋಗಿಭಕ್ತಿ ಆಚಾರ್ಯಭಕ್ತಿ ಶಾಂತಿಭಕ್ತಿಗಳನ್ನೂ ಪಠಿಸಬೇಕು.

ಪಾಕ್ಷಿಕ ಚಾತುರ್ಮಾಸಿಕ ವಾರ್ಷಿಕಸಂಬಂಧವಾದ ಪ್ರತಿಕ್ರಮಣಗಳನ್ನು ಮಾಡುವಾಗ ಸಿದ್ಧಭಕ್ತಿ ಚಾರಿತ್ರಭಕ್ತಿ ಚತುರ್ವಿಂಶತಿತೀರ್ಥಕರಭಕ್ತಿ ಪಂಚಗುರುಭಕ್ತಿ ಆಚಾರ್ಯಭಕ್ತಿಗಳನ್ನು ಪಠಿಸಬೇಕು. ಪ್ರತಿಕ್ರಮಣವೆಂದರೆ ಕರ್ಮವಶದಿಂದಲೂ ಪ್ರಮಾದದಿಂದಲೂ ಉಂಟಾದ ದುಷ್ಕೃತವು ನನಗೆ ಮಿಥ್ಯೆಯಾಗಲಿ ಎಂದರೆ ಇಲ್ಲದಂತಾಗಲಿಯೆಂಬ ಭಾವನೆಯಿಂದ ಮಾಡುವ ಪ್ರತಿಕಾರವೆಂದರ್ಥವು.

**ವರ್ಷಾಯೋಗ**— ಚಾತುರ್ಮಾಸ್ಯ ನಿಯಮವನ್ನು ಧಾರಣ ಮಾಡುವಾಗ ಆಷಾಢಶುದ್ಧ ಚತುರ್ದಶಿಯ ರಾತ್ರಿ ಮೊದಲನೆಯ ಜಾವದಲ್ಲಿ ಸಿದ್ಧಭಕ್ತಿ ಯೋಗಿಭಕ್ತಿಗಳನ್ನು ಪಠಿಸಿ ಚತುರ್ದಿಕ್ಷು ಪ್ರದಕ್ಷಿಣವನ್ನು ಮಾಡಿ ಚೈತ್ಯಭಕ್ತಿ ಪಂಚಗುರುಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು. ಈ ಕ್ರಮದಿಂದ ನಾಲ್ಕು ತಿಂಗಳುಗಳ ವರೆಗೆ ಒಂದು ಕಡೆಯಲ್ಲಿರುತ್ತೇನೆಂಬ ಸಂಕಲ್ಪವನ್ನು ಮಾಡಿಕೊಂಡು ಕಾರ್ತಿಕ ಬಹುಳ ಚತುರ್ದಶಿಯ ದಿವಸ ಈ ನಿಯಮವನ್ನು ಪೂರ್ತಿ ಮಾಡಬೇಕು.

ತನ್ನ ಉತ್ತಮ ಗುಣಗಳಿಂದ ಸಮಸ್ತ ಸಂಘಕ್ಕೆ ಮಾನ್ಯನಾದ ಶಿಷ್ಯಮುನಿಗೆ "ಇಂದಿನಿಂದ ನೀನು ಶಾಸ್ತ್ರರಹಸ್ಯವನ್ನು ಅಧ್ಯಯನ ಮಾಡುವದಕ್ಕೂ ದೀಕ್ಷೆಯನ್ನು ಕೊಡುವದಕ್ಕೂ ಯೋಗ್ಯನಾಗಿರುತ್ತೀ" ಎಂದು ಹೇಳಿ ಗುರುವು ಸಂಘಸಮಕ್ಷದಲ್ಲಿ ಉತ್ತಮ ಮುಹೂರ್ತದಲ್ಲಿ ಆಚಾರ್ಯಪದವಿಯನ್ನು ಕೊಡಬೇಕು. ಆಗ ಆ ಮುನಿಯು ಸಿದ್ಧಭಕ್ತಿ ಆಚಾರ್ಯಭಕ್ತಿಗಳನ್ನು ಪಠಿಸಿ ಗುರುವಿನ ಆಜ್ಞೆಯಿಂದ ಆಚಾರ್ಯಪದವಿಯನ್ನು ಗ್ರಹಣಮಾಡಿ ಬಳಿಕ ಶಾಂತಿಭಕ್ತಿಯನ್ನು ಪಠಿಸಬೇಕು.

ನೂತನದೀಕ್ಷಿತನಾದ ಮುನಿಯು ಪ್ರತಿಮಾಯೋಗವನ್ನು ಧಾರಣ ಮಾಡಿದಾಗ ಇತರ ಮುನಿಗಳು ಸೇರಿ ಆದರ—ಪ್ರೀತಿಯಿಂದ ಸಿದ್ಧಭಕ್ತಿ ಯೋಗಿಭಕ್ತಿ ಶಾಂತಿಭಕ್ತಿಗಳನ್ನು ಪಠಿಸಬೇಕು.

ಕೇಶಲೋಚವನ್ನು ಮಾಡಿಕೊಳ್ಳುವದು, ಮುನಿಗೆ ಹೆಸರನ್ನಿಡುವದು, ನಗ್ನತ್ವವನ್ನು ಧರಿಸುವದು, ಪಿಂಛವನ್ನು ಧಾರಣಮಾಡುವುದು ಈ ಕ್ರಿಯಾಸಮೂಹಕ್ಕೆ ದೀಕ್ಷೆಯೆಂದು ಹೆಸರು. ಇಂತಹ ದೀಕ್ಷೆಯನ್ನು ತೆಗೆದುಕೊಳ್ಳುವವನು ಮೊದಲು ಸಿದ್ಧಭಕ್ತಿ ಯೋಗಿಭಕ್ತಿಗಳನ್ನು ಪಠಿಸಿ ದೀಕ್ಷಾಧಾರಣವನ್ನು ಮಾಡಿ ಬಳಿಕ ಪುನಃ ಸಿದ್ಧಭಕ್ತಿಯನ್ನು ಪಠಿಸಬೇಕು.

ದೀಕ್ಷಾಸಮಯವನ್ನು ಬಿಟ್ಟು ಇತರಸಮಯದಲ್ಲಿ ಕೇಶಲೋಚವನ್ನು ಮಾಡಿಕೊಳ್ಳುವಾಗ ಸಿದ್ಧಭಕ್ತಿ ಯೋಗಿಭಕ್ತಿಗಳನ್ನು ಹೇಳ

ಬೇಕು. ಲೋಚವಾದನಂತರ ಪುನಃ ಸಿದ್ಧಭಕ್ತಿಯನ್ನು ಹೇಳಬೇಕು. ಲೋಚವನ್ನು ಮಾಡಿಕೊಂಡ ದಿವಸ ಉಪವಾಸವನ್ನು ಮಾಡುವದು ಉತ್ತಮ ಪಕ್ಷ. ಲೋಚವನ್ನು ಎರಡುತಿಂಗಳಿಗೊಮ್ಮೆ ಮಾಡಿಕೊಳ್ಳುವದು ಉತ್ತಮ ಪಕ್ಷ. ಮೂರುತಿಂಗಳಿಗೊಮ್ಮೆ ಮಾಡಿಕೊಳ್ಳುವದು ಮಧ್ಯಮ ಪಕ್ಷ. ನಾಲ್ಕು ತಿಂಗಳಿಗೊಮ್ಮೆ ಮಾಡಿಕೊಳ್ಳುವುದು ಜಘನ್ಯಪಕ್ಷ.

ಪ್ರತಿಕ್ರಮಣವಿಧಿಯನ್ನು ಮಾಡುವಾಗ ಸಿದ್ಧಭಕ್ತಿ ಪ್ರತಿಕ್ರಮಣಭಕ್ತಿ ವೀರಭಕ್ತಿ ಚತುರ್ವಿಂಶತಿ ತೀರ್ಥಂಕರಭಕ್ತಿಗಳನ್ನೂ ರಾತ್ರಿ ಪ್ರತಿಮಾಯೋಗವನ್ನು ಧಾರಣಮಾಡುವಾಗಲೂ ಯೋಗವನ್ನು ಬಿಡುವಾಗಲೂ ಯೋಗಭಕ್ತಿಯನ್ನು ಪಠಿಸಬೇಕು.

ದೇವ ವಂದನಾದಿ ಕ್ರಿಯೆಯಲ್ಲಿ ನ್ಯೂನಾಧಿಕ್ಯವುಂಟಾದರೆ ಸಮಾಧಿಭಕ್ತಿಯನ್ನು ಪಠಿಸಬೇಕು,

## ಸಂಸ್ಕೃತ ಸಿದ್ಧಭಕ್ತಿ

ಸಿದ್ಧ ಪರಮೇಷ್ಠಿಗಳು ಜ್ಞಾನಾವರಣಾದಿ ಕರ್ಮಗಳನ್ನು ನಷ್ಟಪಡಿಸಿ ಕೊಂಡವರು. ಅವರಲ್ಲಿರುವ ಅನಂತ ಜ್ಞಾನಾದಿ ಗುಣಗಳು ನನ್ನ ಮನಸ್ಸನ್ನು ಸೆಳೆಯುವು. ಅವರನ್ನು ವಂದಿಸುವೆ. ಸುವರ್ಣ ಮಿಶ್ರಿತ ಕಲ್ಲಿಗೆ ಅನೇಕ ದ್ರಾವಕಗಳನ್ನು ಸೇರಿಸಲು ಶುದ್ಧ ಸುವರ್ಣ ಹೊರಡುವದು. ಅದರಂತೆ ಅಶುಭ ಕರ್ಮ ನಷ್ಟವಾಗಲು ಆತ್ಮನ ಉಜ್ವಲ ಗುಣಗಳು ಪ್ರಕಟವಾಗುತ್ತವೆ. ಇದೇ ಸಿದ್ಧಿಯು. ಕರ್ಮದಿಂದ ಮುಕ್ತನಾಗುವದೇ ಸಿದ್ಧಿಯು. ॥ ೧ ॥

ತಾನು ಮಾಡಿದ ಕರ್ಮದ ಫಲವನ್ನು ಭೋಗಿಸುವುದರಿಂದಲೂ, ಜನನ ಮರಣಗಳಿಂದಲೂ ಮುಕ್ತಿಯಿಂದಲೂ ಆತ್ಮನ ಅಸ್ತಿತ್ವ ಸಿದ್ಧಿಸುವುದು. ದೀಪದಂತೆ ಆತ್ಮ ನಷ್ಟವಾಗುವದೇ ಸಿದ್ಧಿಯೆಂದು ಹೇಳುವ ಬೌದ್ಧರಮತವೂ, ಆತ್ಮನಲ್ಲಿರುವ ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಯತ್ನ, ಧರ್ಮ, ಅಧರ್ಮ, ಸಂಸ್ಕಾರ ಈ

ಒಂಭತ್ತು ಗುಣಗಳು ನಷ್ಟವಾಗುವುದೇ ಸಿದ್ಧಿ ಅನ್ನುವ ಯೌಗರ ಮಾತೂ ಅಷ್ಟು ಸರಿಯೆನಿಸುವದಿಲ್ಲ. ॥ ೨ ॥

ಆತ್ಮನು ಅಂತರಂಗ ಶುದ್ಧಿಯಿಂದಲೂ ಬಹಿರಂಗ ಸಾಧನೆಯಿಂದಲೂ ಘಾತಿ ಕರ್ಮಗಳನ್ನು ನಷ್ಟಪಡಿಸಿಕೊಳ್ಳುತ್ತಾನೆ. ಪ್ರಕಟನಾಗುತ್ತಾನೆ. ಆಗ ಅವನಿಗೆ ಸಮ್ಯಕ್ ದರ್ಶನ ಜ್ಞಾನಾದಿಗಳೂ ಶ್ರೇಷ್ಟವಾದ ಜ್ಞಾನ ಸುಖಗಳೂ ಪ್ರಾಪ್ತವಾಗುತ್ತವೆ. ॥ ೩ ॥

ಆತ್ಮನು ಸ್ವಯಂಭುವು. ಅಂದರೆ ಇವನು ತನ್ನಲ್ಲಿ ತಾನೇ ಮಗ್ನನಾಗಿದ್ದು. ಪರರ ನೆರವಿಲ್ಲದೆ ತನ್ನ ಶಕ್ತಿಯಿಂದಲೇ ಮುಕ್ತಿ ಹೊಂದುವನು. ಇವನಿಗೆ ಲೋಕಾಲೋಕಗಳನ್ನು ತಿಳಿಯುವಜ್ಞಾನ, ಅನಂತ ವ್ಯಾಪ್ತಿ, ದಿವ್ಯ ಭಾಷೆ, ಕೇವಲ ಜ್ಞಾನ ಮುಂತಾದ ಶ್ರೇಷ್ಠ ಗುಣಗಳು ಇರುತ್ತವೆ. ॥ ೪ ॥

ಈ ಆತ್ಮನಲ್ಲಿ ಸ್ವಾಭಾವಿಕವಾಗಿ ಉಚ್ಚಸ್ಥಿತಿಗೆ ಹೋಗುವ ಗುಣವಿದೆ. ಆದರೂ ಕೆಳಗೆಳೆಯುವ ಅಘಾತಕರ್ಮಗಳನ್ನು ನಷ್ಟಪಡಿಸಲಿಕ್ಕೆ ಬೇಕು. ಎಂಬತ್ತು ನಾಲ್ಕು ಗುಣಗಳನ್ನು ಸಂಪಾದಿಸಲಿಕ್ಕೆ ಬೇಕು. ಇದಕ್ಕೆ ಸಮ್ಯಕ್ತ್ವ, ಜ್ಞಾನ, ದರ್ಶನ ವೀರ್ಯಗಳು ಅವಶ್ಯಕವಾದವುಗಳು. ಅದರಂತೆ ಕ್ಷಾಯಿಕಗಳಾದ ಸೂಕ್ಷ್ಮತ್ವ, ಅವ್ಯಾಬಾಧ, ಅವಗಾಹ ಅಗುರುಲಘುಗಳೆಂಬ ಗುಣಗಳಿಂದಲೂ ಕರ್ಮ ಪ್ರಕೃತಿ ನಾಶವಾಗುವದು. ॥ ೫ ॥

ಮುಕ್ತಾತ್ಮನಿಗೆ ಕ್ಷಯ ವೃದ್ಧಿಗಳಿಲ್ಲ. ಅವನು ಸಂಸಾರದಲ್ಲಿರುವಾಗ ಯಾವದೇಹ ಧಾರಣಮಾಡಿರುವನೋ ಅದಕ್ಕಿಂತ ಸ್ವಲ್ಪ ಸಣ್ಣದಾದ ದೇಹದ ಪ್ರತಿಬಿಂಬ ಉಳ್ಳವನಿರುವನು. ಆದರೆ ಶಬ್ದ, ರಸ, ರೂಪ, ಗಂಧಗಳು ಇರುವದಿಲ್ಲ; ದುಃಖಗಳೂ ಇರುವದಿಲ್ಲ. ॥ ೬ ॥

ಸಿದ್ಧಾವಸ್ಥೆಯಲ್ಲಿ ಆತ್ಮನು ಸ್ವಸಂಪೂರ್ಣನು. ಅವನಿಗೆ ಅಪೇಕ್ಷೆಯಿಲ್ಲ. ವಿರೋಧ ಭಾವಗಳಿಲ್ಲ. ಉಪಮೆಯಿಲ್ಲದ ಸುಖಿಯಾಗಿರುವನು. ॥ ೭ ॥

ಬೆಳಕಿನಲ್ಲಿ ದೀಪದ ಅವಶ್ಯಕತೆಯಿರುವದಿಲ್ಲ. ಅದರಂತೆ ಸಿದ್ಧರಿಗೆ ಹಸಿವು, ರೋಗ ನಿದ್ರೆ ಮೊದಲಾದವುಗಳು ಇರುವದಿಲ್ಲ ವಾದುದರಿಂದ ಅನ್ನ, ಔಷಧ ಹಾಸಿಗೆ ಮೊದಲಾದವುಗಳ ಅಗತ್ಯವಿಲ್ಲ. ||೮||

ಇಂತಹ ಅನಂತಜ್ಞಾನಾದಿ ಗುಣಗಳಿಂದಲೂ ನಯಗಳಿಂದಲೂ ಜ್ಞಾನಗಳಿಂದಲೂ ಚಾರಿತ್ರ್ಯದಿಂದಲೂ ದರ್ಶನದಿಂದಲೂ ಕೂಡಿದ ಸಿದ್ಧಾತ್ಮರನ್ನು ಮೂರು ಕಾಲಗಳಲ್ಲಿ ವಂದಿಸುತ್ತೇನೆ, ನೆನೆಯುತ್ತೇನೆ. ಇದೆಲ್ಲ ಮಾಡುವುದು ನಾನೂ ಸಿದ್ಧನಾಗಬೇಕೆಂದೇ. || ೯ ||

ತಪಸ್ಸಿಗೆ ಕಾಯೋತ್ಸರ್ಗನಿಂತು ಪರಿಶುದ್ಧ ಚಿತ್ತದಿಂದ ಧ್ಯಾನಿಸಿದರೆ ಪರಮ ಸುಖ ಸಿಗುವದು. || ೧೦ ||

## ಪ್ರಾಕೃತ ಸಿದ್ಧಭಕ್ತಿ

ಎಂಟು ಕರ್ಮಗಳನ್ನು ಗೆದ್ದವರೂ ಎಂಟು ಗುಣಗಳಿಂದ ಕೂಡಿದವರೂ ಮುಕ್ತಸ್ಥಾನದಲ್ಲಿರುವವರೂ ಆದ ಸಿದ್ಧ ಪರಮೇಷ್ಠಿಗಳಿಗೆ ವಂದಿಸುವೆ. || ೧ ||

ತೀರ್ಥಂಕರ ಪದವಿಯಿಂದಲೂ ನೆಲ, ನೀರು ಮುಗಿಲುಗಳಲ್ಲಿಯೂ ಎಲ್ಲ ದೇಹ ಪ್ರಮಾಣದಲ್ಲಿಯೂ ಎಲ್ಲ ಕಾಲದಲ್ಲಿಯೂ ಸಿದ್ಧರಾದವರಿಗೆ ನಮಸ್ಕಾರವು || ೨ ||

ನಾನಾ ಅವಸ್ಥಾ ಭೇದಗಳಿಂದ ಮುಕ್ತರಾದ ಎಲ್ಲಾ ಸಿದ್ಧ ಪರಮೇಷ್ಠಿಗಳಿಗೆ ವಂದಿಸುತ್ತೇನೆ. || ೩ ||

ಮೊದಲು ಒಂದೆರಡು ಜ್ಞಾನಗಳನ್ನು ಪಡೆದು ಆ ಮೇಲೆ ಕೇವಲ ಜ್ಞಾನ ಪಡೆದವರನ್ನು ಚಾರಿತ್ರ್ಯದಿಂದ ಸಿದ್ಧಾತ್ಮರಾದವರನ್ನು ವಂದಿಸುವೆ || ೪ ||

ಉಪಸರ್ಗವಾಗಿಯೂ ಆಗದೆಯೂ ಸಿದ್ಧರಾದವರಿಗೆ ಅನೇಕ ಆಸನಗಳಲ್ಲಿ ಕುಳಿತು, ನಿಂತು ತಪಸ್ಸು ಮಾಡಿ ಸಿದ್ಧರಾದವರಿಗೆ ನಮಸ್ಕರಿಸುವೆ. || ೫ ||

ಭಾವದಿಂದ ಪುರುಷ ಸ್ತ್ರೀ ನಪುಂಸಕರಿದ್ದರೂ ಮೋಹನಿಯ ಕರ್ಮವನ್ನು ನಷ್ಟಗೊಳಿಸಿ ಶುಕ್ಲಧ್ಯಾನದಿಂದ ಕೂಡಿದ ಸಿದ್ಧಪುರುಷ ರಾದವರಿಗೆ ನಮಸ್ಕರಿಸುವೆನು. ॥ ೬ ॥

ಸ್ವಾಭಾವಿಕ, ಅಸ್ಥಿರ ಬೋಧೆಯಿಂದ, ಕಾರಣದಿಂದ, ವಿನಾ ಕಾರಣದಿಂದ ಹೇಗಾದರೂ ವೈರಾಗ್ಯವನ್ನು ಹೊಂದಿ ಸಿದ್ಧರಾದವರಿಗೆ ವಂದನೆಗಳು. ॥ ೭ ॥

೧೪೮ ಕರ್ಮ ಪ್ರಕೃತಿಗಳು ನಷ್ಟವಾಗಲು ಸಿದ್ಧರಾಗುತ್ತಾರೆ. ॥ ೮ ॥

ಅವರು ಉತ್ಕೃಷ್ಟವಾದುದೂ ಅಕ್ಷಯವಾದುದೂ ಆದ ಸೌಖ್ಯವನ್ನು ಹೊಂದುತ್ತಾರೆ. ॥ ೯ ॥

ಇವರು ಲೋಕದ ತುತ್ತ ತುದಿಯಲ್ಲಿರುತ್ತಾರೆ. ಇವರಿಗೆ ಉಗುರು ಕೊಗಲು ಮೊದಲಾದ ಶರೀರ ಭಾಗಗಳು ಕಡಿಮೆಯಾಗಿರುತ್ತವೆ ॥ ೧೦ ॥

ಹುಟ್ಟು ಮುಪ್ಪು ಸಾವುಗಳಿಲ್ಲದ ಸಿದ್ಧರು ನಮಗೆ ಜ್ಞಾನವನ್ನೀಯಲಿ. ॥ ೧೧ ॥

ಮೂವತ್ತೆರಡು ದೋಷಗಳನ್ನು ತೊರೆದು ಯಾರು ಸಿದ್ಧರಿಗೆ ವಂದಿಸುತ್ತಾರೋ ಅವರು ಉತ್ಕೃಷ್ಟ ಸುಖವನ್ನು ಪಡೆಯುತ್ತಾರೆ. ॥ ೧೨ ॥

ಪುದ್ಗಲದಂತೆ ರೂಪ, ರಸ, ಗಂಧ ಸ್ಪರ್ಶಗಳಿಂದ ಕೂಡಿದ ದೇಹವು ಸಿದ್ಧರಿಗೆ ಇರುವದಿಲ್ಲ. ಇವರಿಗೆ ಅಖಂಡ ಶರೀರವಿರುತ್ತದೆ. ॥ ೧೩ ॥

ಇವರು ಮೂಲ ಪ್ರಕೃತಿ ಉತ್ತರ ಪ್ರಕೃತಿಗಳಿಂದ ಬಿಡಲ್ಪಟ್ಟವರಿರುತ್ತಾರೆ. ಮಂಗಲ ಸ್ವರೂಪರೂ ಇರುವರು. ॥ ೧೪ ॥

ಇವರು ಕೃತಕೃತ್ಯರು. ಅನಂತ ಸುಖವುಳ್ಳವರು. ಭಾವ ಕರ್ಮ ಕೂಡ ಇಲ್ಲದವರು ॥ ೧೫ ॥

ಇವರು ಮೂರು ಲೋಕಕ್ಕೆ ಕಿರೀಟದಂತೆ ಇರುವರು. ॥೧೬॥

ಇವರು ಗಮನ ಆಗಮನ ರಹಿತರು. ಸಂಸಾರ ಭ್ರಮಣ ರಹಿತರು ನಿತ್ಯ ಸುಖವನ್ನು ಹೊಂದಿದವರು. ॥ ೧೭ ॥

ಇವರಿಗೆ ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ ಸೂಕ್ಷ್ಮತ್ವ, ಇತ್ಯಾದಿ ಎಂಟು ಗುಣಗಳಿರುತ್ತವೆ. ತಪಶ್ಚರ್ಯದಿಂದ ಸಿದ್ಧರಾಗಿರುತ್ತಾರೆ. ಇವರ ಪದಕಮಲಗಳಲ್ಲಿ ಮಸ್ತಕವನ್ನಿಡುವೆ ॥ ೧೮-೨೦ ॥

ಸಮಸ್ತ ಸಿದ್ಧರನ್ನು ವಂದಿಸುವೆ; ಪೂಜಿಸುವೆ; ಅರ್ಚಿಸುವೆ. ನನಗೆ ಜಿವನ ಗುಣ ಸಂಪತ್ತಿ ಒದಗಲಿ.

## ಶ್ರುತ ಭಕ್ತಿ

ಲೋಕಾಲೋಕಗಳನ್ನು ತಿಳಿಯಬೇಕೆಂಬುವವನಿಗೆ ಸಮ್ಯಕ್ ಜ್ಞಾನವು ಕಣ್ಣಿದ್ದಂತೆ. ಇದರಲ್ಲಿ ಮತಿ ಶ್ರುತ ಜ್ಞಾನಗಳು ಪರೋಕ್ಷವು. ಅವಧಿ ಮನಃಪರ್ಯಯ ಜ್ಞಾನಗಳು ವಿಕಲ ಪ್ರತ್ಯಕ್ಷಗಳು ಕೇವಲ ಜ್ಞಾನವು ಸಕಲ ಪ್ರತ್ಯಕ್ಷ ಜ್ಞಾನವು. ॥ ೧ ॥

ಮತಿಜ್ಞಾನದಲ್ಲಿ ೩೩೬ ಭೇದಗಳು. ಇವುಗಳನ್ನು ಮನಸ್ಸು ಸ್ಪರ್ಶ ಮೊದಲಾದ ಇಂದ್ರಿಯಗಳಿಂದ ಅರಿಯಬಹುದು. ಇದು ಒಂದು ವಿಷಯಕ್ಕೆ ಇನ್ನೊಂದು ವಿಷಯ ಸೇರದಂತೆ ಶುದ್ಧರೂಪದಲ್ಲಿ ವಿಷಯ ಗ್ರಹಣಮಾಡುವಂತಹದು. ಶ್ರುತಜ್ಞಾನೋತ್ಪತ್ತಿಗೆ ಕಾರಣವಾದ ಅಭಿನಿಬೋಧಿಕ ಜ್ಞಾನವೇ ಮತಿಜ್ಞಾನವು. ॥ ೨ ॥

ಅನೇಕ ವಿಷಯಗಳ ಜ್ಞಾನವು ಮಿಶ್ರವಾಗದೆ ಶುದ್ಧವಾಗಿ ಉಳಿಯುವಂತಹ ಬುದ್ಧಿಗೆ ಕೋಷ್ಠ ಬುದ್ಧಿಯೆಂದು ಹೆಸರು. ಉಗ್ರಾಣದಲ್ಲಿ ವಿವಿಧ ಧಾನ್ಯಗಳು ಕೂಡದಂತೆಯೂ ಮುಗಿದು ಹೋಗದಂತೆಯೂ ಇರುವ ಹಾಗೆ ಇದು ಇರುತ್ತದೆ. ॥ ೩ ॥

ಶ್ರುತಜ್ಞಾನವು ಜಿನನು ಬೋಧಿಸಿದಂತಹದು. ಗಣಧರರು ರಚಿಸಿದಂತಹದು. ಇದರಲ್ಲಿ ಮುಖ್ಯ ಎರೆಡು ಭಾಗವಿದ್ದು, ಅವುಗಳಲ್ಲಿ ಅನೇಕ ವಿಭಾಗಗಳಿವೆ. ॥ ೪ ॥

ಶ್ರುತಜ್ಞಾನವು ಶಾಸ್ತ್ರಪದ್ಧತಿಯಿಂದ ಹನ್ನೆರಡು ವಿಧವಾಗಿ ಹೇಳಿದೆ. ಇದರಲ್ಲಿ (೧) ಪರ್ಯಾಯ, (೨) ಅಕ್ಷರ (೩) ಪದ (೪) ಸಂಘಾತ (೫) ಪ್ರತಿಪತ್ತಿ (೬) ಅನುಯೋಗ (೭) ಪ್ರಾಭೃತಕ ಪ್ರಾಭೃ

ತಕ (೮) ಪ್ರಾಭೃತಕ (೯) ವಸ್ತು ೧೦ ಪೂರ್ವ ಇವು ಹತ್ತು ಹಾಗೂ ಇವುಗಳ ಹತ್ತು ಸಮಾಸಗಳು ಸೇರಿ ಇದರಲ್ಲಿ ೨೦ ಭೇದಗಳು||೫-೬ ||

ಆಚಾರ, ಸೂತ್ರಕೃತ, ಸ್ಥಾನ, ಸಮವಾಯ, ವ್ಯಾಖ್ಯಾ ಪ್ರಜ್ಞಪ್ತಿ, ಜ್ಞಾತೃಕಥಾ, ಉಪಾಸಕಾಧ್ಯಯನ, ಅಂತಕೃದ್ದಶ, ಅನುತ್ತರೋಪಪಾದಿಕದಶ, ಪ್ರಶ್ನ ವ್ಯಾಕರಣ, ವಿಪಾಕ ಸೂತ್ರ, ಹೀಗೆ ಇದಕ್ಕೆ ಹನ್ನೊಂದು ಅಂಗಗಳು. || ೭-೮ ||

ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ, ಚೂಲಿಕೆ ಈ ಐದು ಭೇದಗಳು ಹನ್ನೆರಡನೆಯ ದೃಷ್ಟಿವಾದಾಂಗದಲ್ಲಿ ರುತ್ತವೆ. || ೯ ||

ಪೂರ್ವಗತವು ಉತ್ಪಾದ ಪೂರ್ವ, ಅಗ್ರಾಯಣೀಯ ಪೂರ್ವ, ವೀರ್ಯಾನುವಾದ ಪೂರ್ವ, ಅಸ್ತಿನಾಸ್ತಿ ಪ್ರವಾದ ಪೂರ್ವ, ಜ್ಞಾನ ಪ್ರವಾದ ಪೂರ್ವ, ಸತ್ಯಪ್ರವಾದ ಪೂರ್ವ, ಆತ್ಮಪ್ರವಾದ ಪೂರ್ವ, ಕರ್ಮಪ್ರವಾದ ಪೂರ್ವ, ಪ್ರತ್ಯಾಖ್ಯಾನ ಪೂರ್ವ, ವಿದ್ಯಾನುವಾದ ಪೂರ್ವ, ಕಲ್ಯಾಣವಾದ ಪೂರ್ವ, ಪ್ರಾಣವಾಯು ಪೂರ್ವ, ಕ್ರಿಯಾ ವಿಶಾಲ ಪೂರ್ವ, ಲೋಕಬಿಂದುಸಾರ ಪೂರ್ವ, ಎಂದು ಹದಿನಾಲ್ಕು ಪ್ರಕಾರಗಳು. || ೧೦-೧೧-೧೨-೧೩ ||

ಇವು ಕ್ರಮವಾಗಿ ೧೦, ೧೪, ೮, ೧೮, ೧೨, ೧೨, ೧೬, ೨೦, ೩೦, ೧೫, ೧೦, ೧೦, ೧೦, ೧೦, ಇಷ್ಟಿಷ್ಟು ಅಂಗಗಳಿಂದ ಕೂಡಿವೆ. || ೧೪-೧೫ ||

ಹದಿನಾಲ್ಕು ಪೂರ್ವಗಳಲ್ಲಿಯ ಎರಡನೇಯದಾದ ಆಗ್ರಾಯಣೀಯ ಪೂರ್ವದ ಹದಿನಾಲ್ಕು ವಸ್ತುಗಳು ಈ ಪ್ರಕಾರ ಇವೆ. ಪೂರ್ವಾಂತ, ಅಪರಾಂತ, ಧ್ರುವ, ಅಧ್ರುವ, ಚ್ಯವನಲಬ್ಧಿ, ಅಧ್ರುವ ಸಂಪ್ರಣಿಧಿ, ಅರ್ಥ, ಭೌಮಾ ವಯಾದ್ಯ, ಸರ್ವಾರ್ಥ, ಕಲ್ಪನೀಯ, ಅತೀತಜ್ಞಾನ, ಅನಾಗತಕಾಲ, ಸಿದ್ಧ ಉಪಾಧ್ಯ. || ೧೬-೧೭ ||

ನಾಲ್ಕನೆಯ ಪ್ರಾಭೃತಕದ ಅನುಯೋಗಗಳ ಹೆಸರುಗಳು ಈ ರೀತಿ ಅವೆ. ಕೃತಿ, ವೇದನಾ, ಸ್ಪರ್ಶನ, ಕರ್ಮ, ಪ್ರಕೃತಿ, ಬಂಧನ, ನಿಬಂಧನ, ಪ್ರಕ್ರಮ, ಅನುಕ್ರಮ, ಅಭ್ಯುದಯ, ಮೋಕ್ಷ, ಸಂಕ್ರಮ

ಲೇಶ್ಯಾ ಕರ್ಮಲೇಶ್ಯಾ, ಪರಿಣಾಮಲೇಖ್ಯಾ, ಸಾತಮಸಾತ, ದೀರ್ಘ ಹ್ರಸ್ವ, ಭವಧಾರಣೀಯು, ಪುರುಪುದ್ಗಲಾತ್ಮ, ನಿಧತ್ತಮು, ನಿಧತ್ತ, ಸನಿಕಾಚಿತ ಮನಿಕಾಚಿತ್, ಕರ್ಮಸ್ಥಿತಿಕ, ಪಶ್ಚಿಮಸ್ಕಂಧ, ಅಲ್ಪ ಬಹುತ್ವ. ಇವು ಇಪ್ಪತ್ತೈದು. || ೧೮-೨೧ ||

ದ್ವಾದಶಾಂಗ ಸೂತ್ರಕ್ಕೆ ಹನ್ನೆರಡು ಕೋಟಿ ಎಂಬತ್ತಮೂರು ಲಕ್ಷ ಐವತ್ತೆಂಟು ಸಾವಿರದ ಐದು ಪದಗಳಿವೆ. || ೨೨ ||

೧೬೩೪೮೩೦೭೮೮೮ ದ್ವಾದಶಾಂಗ ಸೂತ್ರದಲ್ಲಿ ಇಷ್ಟು ಅಕ್ಷರಗಳಿವೆ. ಇವಕ್ಕೆ ಅಂಗ ಪ್ರವಿಷ್ಟ ಶ್ರುತ ವೆಂದು ಹೆಸರು. || ೨೩ ||

ಅಂಗ ಬಾಹ್ಯ ಶ್ರುತದಲ್ಲಿ ಹದಿನಾಲ್ಕು ವಿಭಾಗಗಳು. ಇವುಗಳಿಗೆ ಪ್ರಕೀರ್ಣಕಗಳೆಂದು ಹೆಸರು. (೧) ಸಾಮಾಯಿಕ (೨) ಚತುರ್ವಿಂಶತಸ್ತವ (೩) ವಂದನಾ (೪) ಪ್ರತಿಕ್ರಮಣ (೫) ವೈದಯಿಕ (೬) ಕೃತಿಕರ್ಮ (೭) ದಶವೈಕಾಲಿಕ (೮) ಉತ್ತರಾಧ್ಯಯನ (೯) ಕಲ್ಪ್ಯವ್ಯವಹಾರ (೧೦) ಕಲ್ಪಾಕಲ್ಪ್ಯ (೧೧) ಮಹಾಕಲ್ಪ್ಯ (೧೨) ಪುಂಡರೀಕ (೧೩) ಮಹಾಪುಂಡರೀಕ (೧೪) ಆಶೀತಿಕ || ೨೪-೨೬ ||

ಅವಧಿ ಜ್ಞಾನದಿಂದ ಅನೇಕ ವಿಷಯುಗಳು ನಿರ್ಣಯಿಸಲ್ಪಡುತ್ತವೆ. ಇದಕ್ಕೆ ಪುದ್ಗಲಗಳೇ ವಿಷಯುಗಳು. ಇದು ಮತಿ ಶ್ರುತಗಳಂತೆ ಪರೋಕ್ಷವಲ್ಲ. ದೇಶಾವಧಿ, ಪರಮಾವಧಿ, ಸರ್ವಾವಧಿ ಹೀಗೆ ಇದರಲ್ಲಿ ಮೂರು ಭೇದಗಳಿವೆ. || ೨೭ ||

ತಮ್ಮ ಆತ್ಮಿಕಬಲದಿಂದ ಪರರ ಮನಸ್ಸನ್ನು ಗ್ರಹಿಸುವಂತಹ ಮುನಿಗಳು ಮನಃಪರ್ಯಾಯ ಜ್ಞಾನಕ್ಕೆ ಋಜುಮತಿ, ವಿಪುಲ ಮತಿಗಳೆಂದು ಎರಡು ಭೇದಗಳನ್ನು ಹೇಳಿದ್ದಾರೆ. || ೨೮ ||

ನಷ್ಟವಾಗದಂತಹದೂ ಅನಂತವಾದುದೂ, ಅಖಂಡವಾದುದೂ ಆದ ಕೇವಲ ಜ್ಞಾನವು ಸುಖವನ್ನು ಕೊಡುವದು. ಈ ಜ್ಞಾನಕ್ಕೆ ಇಂದ್ರಿಯುಗಳ ನೆರವು ಬೇಕಿಲ್ಲ. || ೨೯ ||

ಈ ರೀತಿ ಜ್ಞಾನ ವಿಭಾಗವನ್ನು ವರ್ಣಿಸುವ—ವಂದಿಸುವ—ನನಗೆ ಅನಂತ ಸೌಖ್ಯ ಒದಗಲಿ. || ೩೦ ||

## ಪ್ರಾಕೃತ ಶ್ರುತ ಭಕ್ತಿ

ಸಿದ್ಧಪರಮೇಷ್ಠಿಗಳಿಗೆ ವಂದಿಸಿ ದ್ವಾದಶಾಂಗಳನ್ನು ವಂದಿಸುತ್ತೇನೆ. ||೧|| (೧) ಆಚಾರಾಂಗ (೨) ಸೂತ್ರ ಕೃತಾಂಗ (೩) ಸ್ಥಾನಾಂಗ, (೪) ಸಮವಾಯಾಂಗ (೫) ವ್ಯಾಖ್ಯಾಪ್ರಜ್ಞಪ್ತ್ಯಂಗ. (೬) ಜ್ಞಾತೃಧರ್ಮಕಥಾಂಗ (೭) ಉಪಾಸಕಾಧ್ಯಾಯನಾಂಗ (೮) ಪ್ರಶ್ನವ್ಯಾಕರಣಾಂಗ (೯) ಅಂತಕೃದ್ದಶಾಂಗ (೧೦) ಅನುತ್ತರೌಪಪಾಧಿಕ ದಶಾಂಗ (೧೧) ವಿಪಾಕಸೂತ್ರಾಂಗ ಇವುಗಳಿಗೆ ನಮಸ್ಕರಿಸುವೆ. || ೨-೩ ||

ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ, ಚೂಲಿಕೆ ಈ ಐದು ಭೇದಗಳುಳ್ಳ ಹನ್ನೆರಡನೆಯದಾದ ದೃಷ್ಟಿವಾದಾಂಗವನ್ನು ನಮಸ್ಕರಿಸುವೆ. || ೪ ||

ನಾಲ್ಕನೆಯ ಪೂರ್ವಗತದ ಅಂತರ್ಭೇದಗಳಾದ ಉತ್ಪಾದ, ಅಗ್ರಾಯಣೀಯ, ವೀರ್ಯಾನುವಾದ, ಅಸ್ತಿನಾಸ್ತಿ ಪ್ರವಾದ, ಜ್ಞಾನ ಪ್ರವಾದ, ಸತ್ಯಪ್ರವಾದ, ಆತ್ಮ ಪ್ರವಾದ, ಕರ್ಮ ಪ್ರವಾದ, ಪ್ರತ್ಯಾಖ್ಯಾನ ವಾದ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣಾವಾಯು, ಕ್ರಿಯಾವಿಶಾಲ ಲೋಕಬಿಂದುಸಾರಗಳೆಂದು ಹದಿನಾಲ್ಕು ಪೂರ್ವಗಳು. || ೫-೬ ||

ಮೇಲೆ ಹೇಳಿದ ಪೂರ್ವಗಳಲ್ಲಿ ಕ್ರಮವಾಗಿ ೧೦, ೧೪, ೮, ೧೮, ೧೨, ೧೨, ೧೬, ೨೦, ೩೦' ೧೫, ೧೦, ೧೦, ೧೦, ೧೦, ೧೦ || ೧೯೫ ವಸ್ತು-ಅಧಿಕಾರಗಳೂ ಒಂದೊಂದು ವಸ್ತುವಿನಲ್ಲಿ ಇಪ್ಪತ್ತು ಪಾಭೃತಗಳಂತೆ ೩೯೦೦ ಪ್ರಾಭೃತಗಳೂ ಇರುತ್ತವೆ. || ೭-೧೦ ||

ತೀರ್ಥಂಕರರು ದ್ವಾದಶಾಂಗಾದಿ ಸೂತ್ರದ ಲಾಭವನ್ನು ನನಗೆ ಕೊಡಲಿ. || ೧೧ ||

ಭಗವಂತನೆ! ನಾನು ಶ್ರುತಭಕ್ತಿ ನಿಮಿತ್ತವಾಗಿ ಕಾಯೋತ್ಸರ್ಗವನ್ನ ಮಾಡಿದೆನು. ಅದರ ಲೋಪದೋಷಗಳನ್ನು ವಿಚಾರಮಾಡ ಬಯಸುತ್ತೇನೆ. ಶ್ರುತಜ್ಞಾನದ ಅಂಗಗಳನ್ನ ನಿತ್ಯ ಅರ್ಚಿಸುವೆ,

ಪೂಜಿಸುವೆ, ವಂದಿಸುವೆ, ನಮಸ್ಕರಿಸುವೆ. ನನಗೆ ದುಃಖಕ್ಷಯವೂ ಕರ್ಮಕ್ಷಯವೂ, ಬೋಧಿಲಾಭವೂ, ಸುಗತಿಗಮನವೂ, ಸಮಾಧಿ ಮರಣವೂ ಜಿನಗುಣಸಂಪತ್ತಿಯೂ ಆಗಲಿ.

## ಸಂಸ್ಕೃತ ಚಾರಿತ್ರ ಭಕ್ತಿ

ಯಾವ ಚಾರಿತ್ರ್ಯದ ಬಲದಿಂದ ಮುನಿಗಳು ಮೂರು ಲೋಕಗಳಿಂದ ಪೂಜೆಗೆ ಯೋಗ್ಯರಾದರೋ ಆ ಚಾರಿತ್ರದ ಆಚಾರವು ಐದು ವಿಧವಾದುದು. ಜ್ಞಾನ ದರ್ಶನ, ತಪ, ವೀರ್ಯ, ಚಾರಿತ್ರ್ಯಗಳೆಂದು ಆಚಾರಗಳು ಐದು. ॥ ೧ ॥ ಜ್ಞಾನಾಚಾರವು ಅರ್ಥ, ವಾಚಕ, ಅರ್ಥ ವ್ಯಂಜನಪೂರ್ಣ, ಕಾಲಜ್ಞಾನ, ಉಪಧಾಜ್ಞಾನ, ವಿನಯಜ್ಞಾನ ಗುರುವನ್ನು ವಂಚಿಸದಿರುವದು, ಬಹುಮತಿ ಈ ರೀತಿ ಎಂಟು ವಿಧ.

ನಿಃಶಂಕಾ, ಅಮೂಢ ದೃಷ್ಟಿ, ನಿಃಕಾಂಕ್ಷಾ, ವಾತ್ಸಲ್ಯ, ನಿರ್ವಿಚಿಕಿತ್ಸಾ, ಉಪಗೂಹನ, ಧರ್ಮ ಪ್ರಭಾವನಾ, ಸ್ಥಿತೀಕರಣ ಇವು ಎಂಟು ಸಮ್ಯಗ್ದರ್ಶನದ ಅಂಗಗಳು. ಇವುಗಳ ಆಚರಣೆಯೇ ದರ್ಶನಾಚರವು. ॥ ೨ ॥

ಏಕಾಂತದಲ್ಲಿರುವುದು, ಕಾಯಕ್ಲೇಶ, ವೃತ್ತಿಪರಿಸಂಖ್ಯಾನ ಉಪವಾಸ, ಅರ್ಧ ಹೊಟ್ಟೆಯ ಊಟ, ರಸವತ್ತಾದ ಆಹಾರದ ತ್ಯಾಗ ಹೀಗೆ ಆರು ವಿಧವಾದ ಬಾಹ್ಯತಪಾಚರಣೆಗಳಿಗೆ. ॥ ೪ ॥

ಸ್ವಾಧ್ಯಾಯ, ಪ್ರಾಯಶ್ಚಿತ್ತ, ಧ್ಯಾನ, ವೈಯ್ಯಾವೃತ್ಯ, ಕಾಯೋತ್ಸರ್ಗ, ವಿನಯಗಳೆಂದು ಅಂತರಂಗ ತಪಸ್ಸು ಆರು ವಿಧ. ॥ ೫ ॥

ಸಮ್ಯಗ್ದರ್ಶನ ವಿಶಿಷ್ಟನಾದ ಯತಿಯು ತಪಶ್ಚರ್ಯೆಯಲ್ಲಿ ತನ್ನ ಸಾಮರ್ಥ್ಯವನ್ನು ಉಪಯೋಗಿಸುವದಕ್ಕೆ ವೀರ್ಯಾಚಾರವೆಂದು ಹೆಸರು. ॥ ೬ ॥

ಕಾಯ ಮನೋ ವಚನ ಗುಪ್ತಿಗಳನ್ನೂ ಈರ್ಯಾ, ಭಾಷಾ, ಏಷಣ, ಆದಾನ ನಿಕ್ಷೇಪಣ, ಉತ್ಸರ್ಗಗಳೆಂಬ ಐದು ಸಮಿತಿ

ಗಳನ್ನೂ ಅಹಿಂಸಾ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಐದು ವ್ರತಗಳನ್ನೂ ಆಚರಿಸುವದು ಚಾರಿತ್ರ್ಯಾಚಾರವು ॥ ೭ ॥

ಮೋಕ್ಷಲಕ್ಷ್ಮಿಯ ಪ್ರಾಪ್ತಿಗಾಗಿ ಆಚಾರವುಳ್ಳ ಸಮಸ್ತ ಯತಿಗಳನ್ನು ವಂದಿಸುತ್ತೇನೆ. ॥ ೮ ॥

ಮಹಾಮಹಿಮೆಯುಳ್ಳದಾದ ಚಾರಿತ್ರ್ಯದ ವಿಷಯದಲ್ಲಿ ಮಾಡಲ್ಪಟ್ಟಿರುವ ಮಹಾದೋಷವು. ಆತ್ಮ ನಿಂದೆಯನ್ನು ಮಾಡಿಕೊಳ್ಳುವವನಾದ ನನಗೆ ಇಲ್ಲವಾಗಲಿ. ॥ ೯ ॥

ಮೋಕ್ಷಕ್ಕೆ ಮೆಟ್ಟಿಲಿನಂತಿರುವ ಚಾರಿತ್ರವನ್ನು ಭವ್ಯ ಜೀವಿಗಳು ಪರಿಪಾಲಿಸಲಿ. ॥ ೧೦ ॥

## ಪ್ರಾಕೃತ ಚಾರಿತ್ರ ಭಕ್ತಿ

ಎಲ್ಲ ಜೀವಿಗಳಿಗೆ ಹಿತಕರನೂ, ಧರ್ಮೋಪದೇಶಕನೂ ಆದ ವರ್ಧಮಾನ ತೀರ್ಥಂಕರರಿಗೆ ನಮಸ್ಕಾರವು. ॥ ೧ ॥ ಘಾತಿಕರ್ಮ ವಿನಾಶಕ್ಕಾಗಿ ಐದು ವಿಧವಾದ ಆಚಾರವನ್ನು ಗೌತುಮರು ಹೇಳಿದರು. ॥ ೨ ॥ ಸಾಮಾಯಿಕ, ಛೇದೋಪಸ್ಥಾಪನಾ, ಯಥಾಖ್ಯಾತ, ಪರಿಹಾರವಿಶುದ್ಧಿ, ಸಂಯಮಗಳೆಂದು ಚಾರಿತ್ರವು ಐದು ವಿಧವಾದುದು. ಇವುಗಳ ಆಚರಣೆಯಿಂದ ಮುಕ್ತಿ ಸಿಗುವುದು. ॥ ೩-೪ ॥

ಐದು ಮಹಾ ವ್ರತಗಳನ್ನೂ ಆರು ಕ್ರಿಯೆಗಳನ್ನೂ ಅಲ್ಲದೆ ಭೂಮಿಶಯನ, ವಸ್ತ್ರ ಧರಿಸದಿರುವಿಕೆ, ಸ್ನಾನವಿಲ್ಲದಿರುವಿಕೆ, ಗಡ್ಡ ಮೀಸೆಕೂದಲುಗಳನ್ನು ಕಿತ್ತುಕೊಳ್ಳುವಿಕೆ, ನಿಂತು ಭೋಜನ, ಹಲ್ಲು ತಿಕ್ಕದಿರುವದು, ಮಧ್ಯಾಹ್ನ ಒಪ್ಪತ್ತೂಟ ಇವುಗಳೆಲ್ಲ ಕೂಡಿ ಋಷಿಗಳ ಇಪ್ಪತ್ತೆಂಟು ಮೂಲಗುಣಗಳು. ಇವುಗಳನ್ನೂ ಚನ್ನಾಗಿ ಆಚರಿಸುವುದರಿಂದ ಮುಕ್ತಿಯು ದೊರೆಯುತ್ತದೆ. ॥ ೫-೧೦ ॥

ಭಗವಂತನೆ ಈ ರೀತಿಯಾದ ಸಮ್ಯಕ್ ಚಾರಿತ್ರ್ಯವನ್ನು ನಾನು ಯಾವಾಗಲೂ ಆಚರಿಸುತ್ತೇನೆ, ಪೂಜಿಸುತ್ತೇನೆ, ವಂದಿಸುತ್ತೇನೆ,

ಅರ್ಚಿಸುತ್ತೇನೆ. ನನಗೆ ದುಃಖನಾಶವೂ ಕರ್ಮ ವಿನಾಶವೂ ಬೋಧಿಲಾಭವೂ ಸುಗತಿ ಗಮನವೂ ಸಮಾಧಿ ಮರಣವೂ ಜಿನಗುಣ ಸಂಪತ್ತಿಯೂ ಆಗಲಿ.

## ಸಂಸ್ಕೃತ ಯೋಗಿಭಕ್ತಿ

ರೋಗ, ಪತ್ನಿಪುತ್ರ ವಿಯೋಗವೇ ಮೊದಲಾದ ಪ್ರಾಪಂಚಿಕ ಅಸಂತೋಷಗಳಿಂದಲೂ ನರಕದ ಭೀತಿಯಿಂದಲೂ ಮುಕ್ತರಾದ ಮುನಿಗಳು ಜೀವಿತವು ಜಲಬಿಂದುವಿನಂತೆ ಎಂದು ಭಾವಿಸಿ ತಪಸ್ಸಿಗಾಗಿ ಕಾಡನ್ನು ಸೇರಿದರು.

ಅವರು ವ್ರತ, ಗುಪ್ತಿ, ಸಮಿತಿಗಳಸಾಧನೆಯಿಂದ ರಾಗದ್ವೇಷಗಳನ್ನು ಗೆದ್ದು, ಕರ್ಮಶುದ್ಧಿಗಾಗಿ ತಪಸ್ಸು ಮಾಡುತ್ತಾರೆ.

ಕರ್ಮದ ಕಟ್ಟನ್ನು ಸಡಲಿಸಿಕೊಂಡವರೂ ಕಾಮನವರ್ಮವನ್ನು ಅಡಗಿಸಿದವರೂ ಆದ ದಿಗಂಬರ ಮುನಿಗಳು ಪರ್ವತ ಶಿಖರಗಳಲ್ಲಿ ಕಾಯ್ದುಕಲ್ಲಿನಮೇಲೆ ಕುಳಿತು ತಪಸ್ಸು ಮಾಡುತ್ತಾರೆ; || ೩ ||

ಮುನಿಗಳಿಗೆ ಜ್ಞಾನವೇ ಅಮೃತ, ಕ್ಷಮೆಯೇ ತಂಪು, ಸಂತೋಷವೇ ಕೊಡೆ, ಅದರಿಂದ ಅವರಿಗೆ ಬಿಸಿಲಿನ ತಾಪವಿಲ್ಲ.

ಬೇಸಿಗೆಯ ಬಿಸಿಲಿನಲ್ಲಿಯೂ ಮಳೆಗಾಲದಲ್ಲಿ ಗಿಡದಡಿಯಲ್ಲಿಯೂ ತಪಸ್ಸು ಮಾಡುತ್ತಾರೆ. || ೪-೫ ||

ಇಪ್ಪತ್ತೆರಡು ಪರಿಷಹಗಳನ್ನು ಗೆದ್ದ ಮುನಿಗಳು ಚಾರಿತ್ರದಿಂದ ಚ್ಯುತರಾಗುವದಿಲ್ಲ. ಅವರು ಬೇಸಿಗೆಯಲ್ಲಿ ಆತಪಯೋಗ, ಮಳೆಗಾಲದಲ್ಲಿ ವೃಕ್ಷಯೋಗ, ಚಳಿಗಾಲದಲ್ಲಿ ಶಿಶಿರಯೋಗಗಳನ್ನು ಆಚರಿಸುತ್ತಾರೆ. ಈ ತಪೋವಿಧಾನಗಳಲ್ಲಿ ಉತ್ಸಾಹ ಉಳ್ಳವರೂ ದೇಹಸಾಮರ್ಥ್ಯ ಉಳ್ಳವರೂ ಮೋಕ್ಷಸುಖಾಭಿಲಾಷೆಯುಳ್ಳವರೂ ಆದ ಮುನಿಗಳು ನಮಗೆ ಧರ್ಮಶುಕ್ಲಧ್ಯಾನಗಳನ್ನು ಕೊಡಲಿ. || ೬-೮ ||

## ಪ್ರಾಕೃತ ಯೋಗಿಭಕ್ತಿ

ಸಮ್ಯಕ್ತ್ವವುಳ ಮುನಿಗಳನ್ನು ನಾನು ನನ್ನ ಶಕ್ತಿ ತಿಳುವಳಿಕೆಯಿದ್ದಷ್ಟನ್ನು ಉಪಯೋಗಿಸಿ ಸ್ತುತಿಸುತ್ತೇನೆ. ಮುನಿಗಳಲ್ಲಿ ಭಾವದಲ್ಲಿ

ಸಮ್ಯಕ್ತ್ವ ಉಳ್ಳವರೂ, ಮಿಥ್ಯಾತ್ವ ಉಳ್ಳವರೂ ಎಂದು ಎರಡು ಭೇದಗಳು, ಸಮ್ಯಕ್ತ್ವ ಉಳ್ಳವರೇ ವಂದನೀಯರು. || ೧ - ೨ ||

ಮೂರು ಶಲ್ಯ, ಮೂರು ಗಾರವಗಳಿಂದ ರಹಿತರಾದಂತಹ ತ್ರಿಕರಣ ಶುದ್ಧರಾದ ಮುನಿಗಳಿಗೆ ವಂದಿಸುವೆ. ನಾಲ್ಕು ಕಷಾಯಗಳನ್ನು ನಾಶಮಾಡಿದವರೂ ಚತುರ್ಗತಿರೂಪವಾದ ಸಂಸಾರಕ್ಕೆ ಭೀತರಾದವರೂ ಐದು ಆಸ್ರವಗಳಿಂದ ದೂರವಾಗಿದ್ದು ಪಂಚೇಂದ್ರಿಯಗಳನ್ನು ನಿಗ್ರಹಿಸಿದವರು. ಇಂಥವರು ತಪಸ್ವಿಗಳು. || ೩ - ೪ ||

ಆರು ಪ್ರಕಾರದ ಜೀವಿಗಳಲ್ಲಿ ದಯೆಯುಳ್ಳವರೂ ಆರು ಅಂಯತನಗಳನ್ನು ಪರಿತ್ಯಜಿಸಿದವರೂ ಏಳು ವಿಧವಾದ ಭಯಗಳನ್ನು ತೊರೆದ ಯೋಗಿಗಳಿಗೆ ನಮಸ್ಕಾರವು. || ಎಂಟು ಮದಗಳನ್ನು ತೊರೆದವರೂ ಎಂಟು ಕರ್ಮಗಳನ್ನು ಗೆದ್ದವರೂ ಎಂಟು ಋದ್ಧಿಗಳುಳ್ಳ ಮುನಿಗಳಿಗೆ ವಂದಿಸುವೆ. || ೫ ೬ ||

ಒಂಭತ್ತು ವಿಧ ಬ್ರಹ್ಮಚರ್ಯ ಪಾಲಿಸುವವರೂ ಒಂಭತ್ತು ನಯಗಳ ಸ್ವರೂಪವನ್ನು ತಿಳಿದವರೂ ದಶಧರ್ಮಗಳನ್ನು ಪಾಲಿಸುವವರೂ ದಶ ಸಂಯಮಗಳಲ್ಲಿ ಯುಕ್ತ ಶೀಲರೂ ಆದ ಮುನಿಗಳಿಗೆ ವಂದಿಸುವೆ. || ೭ - ೮ ||

ಹದಿನಾಲ್ಕು ಪ್ರಕಾರದ ಜೀವಿಗಳಲ್ಲಿ ದಯೆಯುಳ್ಳವರೂ ಹದಿನಾಲ್ಕು ಪ್ರಕಾರದ ಮಲದೋಷಗಳನ್ನು ಬಿಟ್ಟವರೂ ಆದ ಮುನಿಗಳಿಗೆ ವಂದಿಸುವೆ. ಆರು ತಿಂಗಳ ಉಪವಾಸ ಮಾಡುವವರನ್ನು ಸೂರ್ಯೋದಯ ಸೂರ್ಯಾಸ್ತ ಸಮಯಗಳಲ್ಲಿ ಸೂರ್ಯನಿಗೆ ಎದುರು ನಿಂತು ತಪ ಮಾಡುವವರನ್ನು ವಂದಿಸುವೆ. || ೯- ೧೦ ||

ಅನೇಕ ವಿಧ ಆಸನಗಳಲ್ಲಿ ಇರುವವರೂ ದೇಹಮಮಕಾರ ಬಿಟ್ಟವರೂ ಮೈ ಕೆರೆಯುವದನ್ನು ಬಿಟ್ಟವರೂ ಆದ ಮುನಿಗಳಿಗೆ ವಂದನೆ || ಕೂದಲುಗಳನ್ನು ಕಿತ್ತುಕೊಳ್ಳುವವರೂ ಕಾಯೋತ್ಸರ್ಗಿಗಳೂ ರೋಗಕ್ಕೆ ಪ್ರತಿಕಾರ ಮಾಡದವರೂ ಆದ ಯೋಗಿಗಳಿಗೆ ವಂದನೆ || ಜಲ್ಲವೆಂಬ ಸರ್ವಾಂಗ ಮಲದಿಂದಲೂ ಮಲ್ಲವೆಂಬ ಶರೀರೈಕ ಪ್ರದೇಶ ಮಲದಿಂದಲೂ ಲಿಪ್ತವಾದ ದೇಹವುಳ್ಳವರೂ ಉದ್ದ

ಉಗುರು ಮೀಸೆಗಳುಳ್ಳವರೂ ಆದವರಿಗೆ ವಂದನೆ॥ ಹದಿನೆಂಟು ಸಾವಿರ ಶೀಲವುಳ್ಳವರೂ ನಾಲವತ್ತುನಾಲ್ಕು ಲಕ್ಷ ಗುಣಗಳುಳ್ಳವರೂ ಆದ ಯೋಗಿಗಳಿಗೆ ವಂದನೆ॥ ಪಕ್ಷೋಪವಾಸ, ಮಾಸೋಪವಾಸ ಮಾಡುವವರೂ, ಅಷ್ಟಮೀ ಚತುರ್ದಶಿಗಳಲ್ಲಿ ಉಪವಾಸವಿರತಕ್ಕವರೂ ಸಿಲು ವಿದ್ಯೆ ಸಂಪನ್ನರೂ ಆದ ಯೋಗಿಗಳಿಗೆ ನಮಸ್ಕಾರವು ॥ ೧೧-೧೫ ॥

ಮಲಸೇ ಔಷಧವಂತೆ ಆಗಿರುವ ಯೋಗಿಗಳಿಗೆ ಮನ ವಚನ ಬಲವುಳ್ಳವರಿಗೆ ಅಗಮ್ಯದ ಅರ್ಥಗಳನ್ನು ತಿಳಿಯುವ ನಿಪುಣರಾದ ಯೋಗಿಗಳಿಗೆ ಎಲ್ಲ ವಿಧದ ಜ್ಞಾನವುಳ್ಳವರಿಗೆ ಇಷ್ಟರೂಪ ಧಾರಣ ಮಾಡುವವರೂ ಬೇಕಾದಲ್ಲಿ ಸಂಚಾರಮಾಡುವವರೂ ಆದ ಯೋಗಿಗಳಿಗೆ ಪ್ರಮಾಣಿಗೆ ಫಲಪ್ರಶ್ನೆಗಳನ್ನು ವಿಘಾತ ಮಾಡದೆ ನಡೆಯುವವರಿಗೆ ಸುಖ ದುಃಖಗಳನ್ನು ಜಯಿಸಿದವರಿಗೆ ನನ್ನ ನಮಸ್ಕಾರವು ॥ ೧೬-೨೨ ॥

ಇಂತಹ ಯೋಗಿಗಳು ಚತುಃ ಸಂಘಕ್ಕೂ ನನಗೂ ಶ್ರೇಷ್ಠವಾದ ಧರ್ಮವನ್ನು ಶುಕ್ಲಧ್ಯಾನ ರೂಪವಾದ ಸಮಾಧಿಯನ್ನೂ ಸಂಸಾರ ದುಃಖ ಕ್ಷಯವನ್ನೂ ಕೊಡಲಿ. ॥ ೨೩ ॥

ಎಲ್ಲ ಕ್ಷೇತ್ರಗಳಲ್ಲಿರುವ-ಎಲ್ಲ ವಿಧದ ಆಸನದಲ್ಲಿರುವ ಸಮಸ್ತ ಸಾಧುಗಳನ್ನು ಅರ್ಚಿಸುತ್ತೇನೆ, ಪೂಜಿಸುತ್ತೇನೆ, ವಂದಿಸುತ್ತೇನೆ. ನನಗೆ ದುಃಖ ಕ್ಷಯವೂ ಬೋಧಿಲಾಭವೂ, ಸುಗತಿಗಮನವೂ, ಸಮಾಧಿಮರಣವೂ ಜಿನಗುಣಸಂಪತ್ತಿಯೂ ಅಗಲಿ.

## ಸಂಸ್ಕೃತ ಆಚಾರ್ಯ ಭಕ್ತಿ

ಸಿದ್ಧಪರಮೇಷ್ಠಿಗಳ ಎಂಟು ಗುಣಗಳ ಸ್ತುತಿಯಲ್ಲಿ ತತ್ಪರರೂ ಕ್ರೋಧಾದಿ ಕಷಾಯಗಳನ್ನು ಗೆದ್ದವರೂ ಮೂರು ಗುಪ್ತಿಗಳಿಂದ ಪರಿಪೂರ್ಣರೂ ಸತ್ಯ ವಚನವುಳ್ಳವರೂ ಜಿನ ಶಾಸನವನ್ನು ಪ್ರಕಾಶ ಪಡಿಸುವಂತಹರೂ ಮುಕ್ತಿಯ ಇಚ್ಛೆಯುಳ್ಳವರೂ ಸದ್ಗುಣಗಳಿಂದ ಕೂಡಿದವರೂ ಆರು ದ್ರವ್ಯಗಳ ನಿಶ್ಚಯಕ್ಕೆ ಆಧ ರವಾದವರೂ ಹದಿನೈದು ಪ್ರಮಾದಗಳಿಂದ ದೂರಿದ್ದವರೂ ಚತುಃಸಂಘಕ್ಕೆ ಸಂತೋಷವನ್ನುಂಟು ಮಾಡುವವರೂ ಆಚಾರ್ಯರಾಗಿರುವರು, ॥೧-೩॥

ಕಠಿನ ತಪಸ್ವಿಗಳೂ ಸ್ವಪರ ಹಿತ ಸಾಧಕರೂ ಕುಮಾರ್ಗವನ್ನು ನಾಶ ಮಾಡುವಂತಹರೂ ಆಗಿರುತ್ತಾರೆ. ಇವರು ದೋಷವುಳ್ಳ, ಆಹಾರವನ್ನೂ ಮುನಿ ಸಂಘವನ್ನು ತ್ಯಜಿಸುತ್ತಾರೆ. ಸಂಪೂರ್ಣವಾದ ನಿದ್ರೆ ಇರುವದಿಲ್ಲ. ಪೂರ್ಣ ಕಾಯೋತ್ಸರ್ಗಿಗಳಿವರು. ಲೇಶ್ರಾಕ್ಷ್ಯಯುದಿಂದ ರಹಿತರೂ ಗೃಹತ್ಯಾಗಿಗಳೂ ಇಂದ್ರಿಯಗಳನ್ನು ಗೆದ್ದವರೂ ಆಗಿರುತ್ತಾರೆ. || ೪-೬ ||

ಆಚಾರ್ಯರು ಅಸದ್ವೃತರೂ ಉತ್ಕಟಿಕಾಸನವುಳ್ಳವರೂ ವಿವೇಕದಿಂದ ಕೂಡಿದ ಮನಸ್ಸುಳ್ಳವರೂ ಶಾಸ್ತ್ರಾಧ್ಯಯನ ಮಾಡುವಂತಹರೂ ಆಗಿರುತ್ತಾರೆ. ಇವರು ದುರ್ಧ್ಯಾನಗಳನ್ನು ಬಿಟ್ಟಿರುತ್ತಾರೆ. ತಪಸ್ವಿಗಳಾಗಿರುತ್ತಾರೆ. ಸಪ್ತಭಯ ರಹಿತರೂ ದೇಹದ ಮೇಲೆ ಮೋಹವಿಡದೆ ತಪಸ್ಸನ್ನಾಚರಿಸುವವರೂ ಆಗಿರುತ್ತಾರೆ. ಇಂತಹ ಎಲ್ಲ ಒಳ್ಳೆಯ ಗುಣಗಳಿಂದ ಯುಕ್ತರಾದ ಆಚಾರ್ಯರನ್ನು ನಾಶ ರಹಿತವಾದ ಮುಕ್ತಿಸುಖವು ನನಗೆ ಲಭಿಸಲೆಂದು ಯಾವಾಗಲೂ ಶುದ್ಧ ಮನಸ್ಸಿನಿಂದ ಸ್ತುತಿಸುತ್ತೇನೆ. || ೭-೧೧ ||

## ಪ್ರಾಕೃತ ಆಚಾರ್ಯ ಭಕ್ತಿ

ದೇಶ, ತಂದೆ ತಾಯಿಯ ವಂಶ ಇವುಗಳಿಂದ ಶುದ್ಧರೂ ಅತ್ಯಂತ ನಿರ್ಮಲವಾದ ಮನೋವಾಕ್ಕಾಯಗಳಿಂದ ಯುಕ್ತರೂ ಆದ ಆಚಾರ್ಯರ ಪಾದಕಮಲವು ನನಗೆ ಮಂಗಲವಾಗಿರಲಿ. || ೧ ||

ಆಗಮದಿಂದಲೂ ಹೇತುಗಳಿಂದಲೂ ಜೀವಾದಿ ಪದಾರ್ಥಗಳನ್ನು ತಿಳಿದು ಸ್ವಪರ ಮತಗಳನ್ನು ತಿಳಿದವರೂ ಜಿನೇಶ್ವರನ ವಚನಗಳನ್ನು ಸಮರ್ಥಮಾಡುವದರಲ್ಲಿ ಚನ್ನಾಗಿ ಸಮರ್ಥರೂ ವಿನಯದಿಂದ ನಡೆಯುವವರೂ ಆಗಿರುತ್ತಾರೆ. ಚಿಕ್ಕವರಾದರೂ ಬುದ್ಧಿಯಿಂದ ಆಚಾರ್ಯರೆನಿಸುವರು. ಶಿಷ್ಯರನ್ನು ಸನ್ಮಾರ್ಗಕ್ಕೆ ತರುವರು. ಮಹಾವ್ರತ, ಸಮಿತಿ ಗುಪ್ತಿಗಳಿಂದ ಕೂಡಿದವರು. ಸಾಧುಗುಣಯುಕ್ತರು. ಕ್ಷಮೆಯಲ್ಲಿ ಪೃಥ್ವಿಯಂತೆಯೂ ಭಾವದಲ್ಲಿ ನಿರ್ಮಲಜಲದಂತೆಯೂ ಕರ್ಮವೆಂಬ ಕಟ್ಟಿಗೆಗೆ ಬೆಂಕಿಯಂತೆಯೂ ಇರುವರು. ಕ್ಷೋಭೆ ಇಲ್ಲದವರಾಗಿರುತ್ತಾರೆ. ಇಂತಹ ಆಚಾರ್ಯರ ಪಾದಗಳಿಗೆ ವಂದಿಸುತ್ತೇನೆ. || ೨-೬ ||

ಸಂಸಾರವೆಂಬ ಅರಣ್ಯದಲ್ಲಿ ಚನ್ನಾಗಿ ಅಲೆಯುತ್ತಿರುವ ಭವ್ಯ ಜೀವಿಗಳು ತಮ್ಮ ಅನುಗ್ರಹದಿಂದ ಮೋಕ್ಷಮಾರ್ಗವನ್ನು ಪಡೆದುವು. ಆಚಾರ್ಯರು ಅಶುದ್ಧವಾದ ಕೃಷ್ಣ, ನೀಲ ಕಪೋತ ಲೇಶ್ಯಾ ರಹಿತರೂ ಶುದ್ಧವಾದ ಪೀತ ಪದ್ಮ ಶುಕ್ಲ ಲೇಶ್ಯಾಯುಕ್ತರೂ ಧರ್ಮ ಶುಕ್ಲ ಧ್ಯಾನಗಳಿಂದ ಕೂಡಿದವರಾಗಿರುತ್ತಾರೆ. ಆಗಮಾರ್ಥ ಭಾವನೆಯನ್ನು ಆವಿರ್ಭಾವಗೊಳಿಸುವಂತಹುಗಳಾದ ಅವಗ್ರಹ, ಈಹಾ, ಅವಾಯ, ಧಾರಣಾ ಗುಣಗಳೆಂಬ ಸಂಪತ್ತಿಯಿಂದ ಕೂಡಿದವರಾದ ಆಚಾರ್ಯರನ್ನು ವಂದಿಸುತ್ತೇನೆ. ನಿಮ್ಮ ಗುಣಗಳ ಸ್ತವನವು ನನಗೆ ಸಮ್ಯಗ್ದರ್ಶನ ಜ್ಞಾನ ಚಾರಿತ್ರ ರೂಪವಾದ ಬೋಧಿಯ ಲಾಭವನ್ನು ಕೊಡಲಿ ॥ ೭-೧೦ ॥

ಭಗವಂತನೆ ! ಆಚಾರ್ಯ ಭಕ್ತಿಯ ನಿಮಿತ್ತ ಕಾಯೋತ್ಸರ್ಗವನ್ನು ಮಾಡಿದೆ. ಐದು ವಿಧವಾದ ಆಚಾರವುಳ್ಳಂಥ ಆಚಾರ್ಯರನ್ನು ಸರ್ವಸಾಧುಗಳನ್ನು ಅರ್ಚಿಸುತ್ತೇನೆ. ಪೂಜಿಸುತ್ತೇನೆ. ವಂದಿಸುತ್ತೇನೆ. ನನ್ನ ದುಃಖ ಕರ್ಮ ಕ್ಷಯಗಳಾಗಲಿ. ಸುಗತಿಗಮನವೂ ಸಮಾಧಿ ಮರಣವೂ ಜಿನಗುಣ ಸಂಪತ್ತಿಯೂ ಆಗಲಿ.

## ಸಂಸ್ಕೃತ ನಿರ್ವಾಣ ಭಕ್ತಿ

ಅಸದೃಶವಾದ ಮೋಕ್ಷವನ್ನು ಹೊಂದಿದವರೂ ಮೂರು ಲೋಕಗಳಿಗೆ ಗುರುಗಳೂ ದೇವೇಂದ್ರ, ಖೇಚರೇಂದ್ರ, ಕುಬೇರ-ಧರಣೇಂದ್ರ ಮೊದಲಾದವರಿಂದ ಪೂಜಿಸಲ್ಪಟ್ಟವರೂ ಆದ ಸನ್ಮತಿ, ಮಹಾವೀರ ಸ್ವಾಮಿಯನ್ನು ಪಂಚ ಕಲ್ಯಾಣಗಳಿಂದ ಸ್ತುತಿಸುತ್ತೇನೆ. ॥ ೧-೨ ॥

ಅಚ್ಯುತವೆಂಬ ಹದಿನಾರನೆಯ ಸ್ವರ್ಗದ ಪುಷ್ಪೋತ್ತರ ವಿಮಾನಾಸಕ್ತರಾದ ದೇವತೆಗಳ ಪ್ರಭುವಾದ ಅಚ್ಯುತೇಂದ್ರನು ಇಪ್ಪತ್ತೆರಡು ಸಾಗರೋಪಮ ಕಾಲ ಸ್ವರ್ಗ ಸುಖವನ್ನನುಭವಿಸಿ ಚಂದ್ರನು ಹಸ್ತ ಮತ್ತು ಉತ್ತರ ನಕ್ಷತ್ರಗಳ ಮಧ್ಯದಲ್ಲಿರುವಾಗ ಆಷಾಢ ಶುದ್ಧ ಷಷ್ಠೀತಿಥಿಯಲ್ಲಿ ಭಾರತದೇಶದ ವಿದೇಹ ಪ್ರಾಂತದ

ಕುಂಡಪುರದಲ್ಲಿ ಸಿದ್ಧಾರ್ಥರಾಜನ ಪುತ್ರನಾಗಿ ಮಹಾವೀರಸ್ವಾಮಿಯು ಪ್ರಿಯಕಾರಿಣಿ ದೇವಿಗೆ ಹದಿನಾರು ಶುಭ ಸ್ವಪ್ನಗಳನ್ನು ಕಾಣಿಸಿ ಆಕೆಯ ಗರ್ಭದಲ್ಲಿ ಅವತರಿಸಿದರು. || ೩-೪ ||

ಚೈತ್ರ ಶುದ್ಧ ತ್ರಯೋದಶೀ ದಿವಸ ಚಂದ್ರನು ಫಲ್ಗುನಿ ನಕ್ಷತ್ರ ದಲ್ಲಿರುವಾಗ ಸಾಮ್ಯವಾದ ಗ್ರಹಗಳು ತಂತಮ್ಮ ಉಚ್ಚಸ್ಥಾನಗಳಲ್ಲಿ ರುವಾಗ ಶುಭಲಗ್ನದಲ್ಲಿ ಮಹಾವೀರಸ್ವಾಮಿಯು ಜನಿಸಿದರು. ಚೈತ್ರ ಶುದ್ಧ ಚತುರ್ದಶಿಗೆ ಚಂದ್ರನು ಹಸ್ತ ನಕ್ಷತ್ರವನ್ನು ಹೊಂದಿದಾಗ ಮುಂಜಾನೆ ದೇವೇಂದ್ರನು ರತ್ನಮಯವಾದ ಘಟಗಳಿಂದ ಮಹಾ ವೀರ ಸ್ವಾಮಿಗೆ ಅಭಿಷೇಕ ಮಾಡಿದನು. || ೫-೬ ||

ವೀರ ಜಿನನು ಮೂವತ್ತು ವರ್ಷ ಕುಮಾರನಾಗಿದ್ದನು. ಅನಂತರ ಲೌಕಾಂತಿಕ ದೇವತೆಗಳ ಉಪದೇಶದಂತೆ ವೈರಾಗ್ಯ ತಳೆದ. ಆಗ ಚಂದ್ರಪ್ರಭವೆಂಬ ಪಲ್ಲಕ್ಕಿಯನ್ನು ಹತ್ತಿ ಪಟ್ಟಣವನ್ನು ಬಿಟ್ಟನು. ಮಾರ್ಗಶಿರ ಮಾಸದ ಕೃಷ್ಣಪಕ್ಷದ ದಶಮೀ ದಿವಸ ಚಂದ್ರನು ಹಸ್ತಾ ಉತ್ತರಾ ನಕ್ಷತ್ರಗಳ ಮಧ್ಯದಲ್ಲಿರುವಾಗ ಎರಡು ದಿವಸ ಉಪವಾಸದ ಪ್ರತಿಜ್ಞೆಯನ್ನು ಮಾಡಿ ಸಾಯಂಕಾಲದಲ್ಲಿ ದೀಕ್ಷೆ ತಕ್ಕೊಂಡನು. || ೭-೯ ||

ಮಹಾವೀರ ಸ್ವಾಮಿಗಳು ಹನ್ನೆರಡು ವರ್ಷ ತಪಸ್ಸುಮಾಡಿ, ಆ ಮೇಲೆ ದೇಶದಲ್ಲಿ ಧರ್ಮೋಪದೇಶಕ್ಕೆ ಹೊರಟರು || ೧೦ ||

ಬಳಿಕ ಋಜುಕೂಲಾನದಿಯ ದಡದಲ್ಲಿರುವ ಜೃಂಭಿಕಾ ಗ್ರಾಮದಲ್ಲಿ ಶಾಲವೃಕ್ಷದಿಂದ ಕೂಡಿದ ಹಾಸುಗಲ್ಲಿನಲ್ಲಿ ಎರಡು ದಿವಸ ಉಪವಾಸನಿಯಮದಿಂದ ಇದ್ದವರೂ ಕರ್ಮಗಳನ್ನು ನಾಶ ಮಾಡುತ್ತ ಪರಿಣಾಮಶುದ್ಧಿಯನ್ನು ಹೊಂದುವುದೆಂಬ ಕ್ಷಪಕ ಶ್ರೇಣಿಯನ್ನು ಹತ್ತಿದವರೂ ಆದ ಮಹಾವೀರ ಸ್ವಾಮಿಗೆ ವೈಶಾಖ ಶುದ್ಧ ದಶಮಿಯ ದಿವಸ ಸಾಯಂಕಾಲದಲ್ಲಿ ಚಂದ್ರನು ಹಸ್ತ ಮತ್ತು ಉತ್ತರಾಷಾಢಾ ನಕ್ಷತ್ರಗಳ ಮಧ್ಯವನ್ನು ಹೊಂದಿದಾಗ ಕೇವಲ ಜ್ಞಾನ ಉಂಟಾಯಿತು. || ೧೧-೧೨ ||

ಕೇವಲ ಜ್ಞಾನೋತ್ಪತ್ತಿಯಾದನಂತರ ಮಹಾವೀರ ಸ್ವಾಮಿಯು ವೈಭಾರ ಪರ್ವತವನ್ನು ಹೊಂದಿದರು. ಅಲ್ಲಿ ಗೌತುಮರೇ ಮೊದಲಾದ ಋಷಿ ಆರ್ಯಿಕಾ, ಶ್ರಾವಕ, ಶ್ರಾವಿಕೆಯರ ಭವ್ಯ ಸಂಗವು ಸೇರಿದ್ದಿತು. ಆಗ ಇವರಿಗೆ ಛತ್ರ, ಅಶೋಕ ವೃಕ್ಷ, ದಿವ್ಯಧ್ವನಿ, ಸಿಂಹಾಸನ, ದುಂದುಭಿ ಮೊದಲಾದ ಅತಿಶಯ ವಸ್ತುಗಳು ಪ್ರಾಪ್ತವಾದವು. ಬಳಿಕ ಅವರು ಮೂವತ್ತು ವರ್ಷಗಳವರೆಗೆ ಮುನಿಗಳಿಗೂ ಶ್ರಾವಕರಿಗೂ ಧರ್ಮವನ್ನು ಬೋಧಿಸಿದರು. ‖ ೧೩-೧೪ ‖

ಮುಂದೆ ಪಾವಾನಗರದ ಉದ್ಯಾನದಲ್ಲಿ ಕಾಯೋತ್ಸರ್ಗಯೋಗದಿಂದ ಮಹಾವೀರ ಮುನಿಗಳು ಕಾರ್ತಿಕ ಅಮಾವಾಸ್ಯೆಯ ದಿನ ಸ್ವಾತಿ ನಕ್ಷತ್ರದಲ್ಲಿ ನಾಲ್ಕು ಅಘಾತಿ ಕರ್ಮಗಳನ್ನು ನಷ್ಟ ಪಡಿಸಿ ಮುಕ್ತಿಯನ್ನು ಪಡೆದರು ‖ ೧೬-೧೭ ‖

ಈ ಸುದ್ದಿಯನ್ನು ನಾಲ್ಕು ವಿಧದ ದೇವತೆಗಳು ಕೇಳಿ ಬೇಗನೆ ಬಂದು ಪೂಜಿಸಿ ಪವಿತ್ರವಾದ ವಸ್ತುಗಳಿಂದ ಜಿನದೇಹವನ್ನು ದಹನ ಮಾಡಿ, ಗಣಧರರನ್ನು ಪೂಜಿಸಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ಈ ಭರತಭೂಮಿಯಲ್ಲಿ ತೀರ್ಥಂಕರರು, ಗಣಧರರೂ ಇತರ ಮುನಿಗಳು ಎಲ್ಲಿ ನಿರ್ವಾಣ ಹೊಂದಿರುವರೇ ಆ ಸ್ಥಾನಕ್ಕೆ ನಮಸ್ಕರಿಸುವೆ. ‖ ೧೮-೨೦ ‖

ಶ್ರೀ ವೃಷಭ ಸ್ವಾಮಿಯವರು ಕೈಲಾಸ ಪರ್ವತದಲ್ಲಿಯೂ ವಾಸುಪೂಜ್ಯ ತೀರ್ಥಂಕರರು ಚಂಪಾಪುರದಲ್ಲಿಯೂ ನೇಮಿ ತೀರ್ಥಂಕರರು ಉರ್ಜಯಂತ ಗಿರಿಯಲ್ಲಿಯೂ ಮಹಾವೀರ ಸ್ವಾಮಿಗಳು ಪಾವಾಪುರದಲ್ಲಿಯೂ ಕೈವಲ್ಯವನ್ನು ಹೊಂದಿದರು. ಉಳಿದ ಇಪ್ಪತ್ತು ಜನ ತೀರ್ಥಂಕರರು ಸಮ್ಮೇದ ಶಿಖರದಲ್ಲಿ ಮುಕ್ತಿಯನ್ನು ಹೊಂದಿದರು. ‖ ೨೧-೨೩ ‖

ಮೊದಲನೆಯ ತೀರ್ಥಂಕರರು ತಮ್ಮ ಆಯುಷ್ಯವು ಹದಿನಾಲ್ಕು ದಿವಸ ಉಳಿದಾಗ, ಇಪ್ಪತ್ತುನಾಲ್ಕನೆಯ ತೀರ್ಥಂಕರರು ತಮ್ಮ ಆಯುಷ್ಯ ಎರಡು ದಿವಸ ಉಳಿದಾಗ ಮನೋಯೋಗಗಳನ್ನು ಕೂಡ ತ್ಯಜಿಸಿ ಮುಕ್ತರಾದರು. ಉಳಿದ ಇಪ್ಪತ್ತೆರಡು

ತೀರ್ಥಂಕರರು ಒಂದು ತಿಂಗಳು ಉಳಿದಾಗ ದ್ರವ್ಯ ಮನೋವಾಕ್ಕಾಯ ವ್ಯಾಪಾರಗಳನ್ನು ತ್ಯಜಿಸಿ ಮುಕ್ತರಾದರು ॥ ೨೬ ॥

ನಾವು ಮನಃಪೂರ್ವಕವಾಗಿ ಭಕ್ತಿಯಿಂದ ಸ್ತುತಿಸಿ ಆ ಭಗವತ್ ತೀರ್ಥಸ್ಥಾನಗಳನ್ನು ಪ್ರದಕ್ಷಿಣಮಾಡುತ್ತೇವೆ. ಅದಕ್ಕೆ ನಮ್ಮಲ್ಲಿರುವ ಮುಕ್ತಿಯ ಬಯಕೆಯೇ ಕಾರಣವು. ॥ ೨೭ ॥

ಪಾಂಡವರು ಶತ್ರುಂಜಯ ಪರ್ವತದಲ್ಲಿಯೂ ಬಲಭದ್ರನು ತುಂಗಿ ಪರ್ವತದಲ್ಲಿಯೂ ದ್ರೋಣಿಮತ್ಪರ್ವತ, ಸಿದ್ಧಪರ್ವತ, ಶ್ರವಣ ಪರ್ವತ, ವಿಪುಲಾಚಲ, ಬಲಾಹಕ ಪರ್ವತ, ವಿಂಧ್ಯಪರ್ವತ, ಪೌದನಪುರ, ವೃಕ್ಷದೀಪಕ ಪರ್ವತ, ಸಹ್ಯಹಿಮವತ್ ಪರ್ವತಗಳೂ ಪವಿತ್ರವಾದವುಗಳು. ಮುನಿಗಳ ಮುಕ್ತಿಸ್ಥಾನಗಳೆಂದು ಪ್ರಸಿದ್ಧವಾದಂಥವುಗಳು. ॥ ೨೮-೩೦ ॥

ಬೆಲ್ಲವನ್ನು ಕೂಡಿಸುವದರಿಂದ ಹಿಟ್ಟಿಗೊಂದು ಮಾಧುರ್ಯ ಬರುವಂತೆ ಮುನಿಗಳು ವಾಸಮಾಡಿದ ಸ್ಥಾನವನ್ನು ನೋಡುವುದರಿಂದ ಪ್ರಾಣಿಗಳಿಗೆ ಪುಣ್ಯಬರುತ್ತದೆ. ಮೇಲೆ ಹೇಳಿದ ಇಪತ್ತುನಾಲ್ಕು ತೀರ್ಥಂಕರರು ನನಗೆ ಮುಕ್ತಿಯನ್ನು ಕೊಡಲಿ ॥ ೩೧-೩೨ ॥

## ಪ್ರಾಕೃತ ನಿರ್ವಾಣ ಭಕ್ತಿ

ಕೈಲಾಸ, ಚಂಪಾಪುರ, ಊರ್ಜಯಂತಗಿರಿ, ಪಾವಾಪುರದಲ್ಲಿ ನಾಲ್ವರು ತೀರ್ಥಂಕರರೂ ಸಮ್ಮೇದಗಿರಿಯಲ್ಲಿ ಉಳಿದ ಇಪ್ಪತ್ತು ಜನರೂ ಮುಕ್ತಿಯನ್ನು ಹೊಂದಿದರು. ಗಜಪಂಥದಲ್ಲಿ ಏಳು ಜನ ಬಲಭದ್ರರೂ ಎಂಟು ಕೋಟಿ ಯಾದವರೂ ಮುಕ್ತರಾದರು. ವರದತ್ತ, ವರಾಂಗ, ಸಾಗರದತ್ತರೂ ಮೂರುವರೆ ಕೋಟಿ ಮುನಿಗಳೂ ತಾರವರ ನಗರದಲ್ಲಿ ಮುಕ್ತರಾದರು. ಪ್ರದ್ಯುಮ್ನ, ಶಂಭುಕುಮಾರ, ಅನಿರುದ್ಧರೂ, ಎಪ್ಪತ್ತೆರಡು ಕೋಟಿ ಏಳುನೂರು ಮುನಿಗಳೂ ಊರ್ಜಯಂತ ಗಿರಿಯಲ್ಲಿ ಸಿದ್ಧರಾದರು. ಅವರಿಗೆ ನನ್ನ ನಮಸ್ಕಾರವು ॥ ೧-೫ ॥

ಲವಕುಶರೂ ಲಾಟದೇಶದ ಐದು ಕೋಟಿ ರಾಜರೂ ಪಾವಾ ಗಿರಿಯಲ್ಲಿ ಮುಕ್ತಿಯನ್ನು ಹೊಂದಿದರು. ಧರ್ಮ, ಭೀಮ, ಅರ್ಜು ನರೂ ಎಂಟು ಕೋಟಿ ದ್ರವಿಡರಾಜರೂ ಶತ್ರುಂಜಯ ಪರ್ವತ ದಲ್ಲಿಯೂ ರಾಮ, ಸುಗ್ರೀವ, ಹನುಮಂತ, ಗವಯ, ಗವ, ನೀಲ, ಮಹಾನೀಲ, ಇವರಲ್ಲದೆ ತೊಂಭತ್ತೊಂಭತ್ತು ಕೋಟಿ ಮುನಿಗಳು ತುಂಗಿ ಪರ್ವತದಲ್ಲಿಯೂ ನಂಗ ಅನಂಗ ಕುಮಾರರೂ ಐದುವರಿ ಕೋಟಿ ಮುನಿಗಳೂ ಸುವರ್ಣಗಿರಿ ( ಸೋನಾಗಿರಿ ) ಯಲ್ಲಿಯೂ ರಾವಣನ ಪುತ್ರರು ಮುನಿಗಳೊಡನೆ ರೇವಾನದಿಯ ತಟದಲ್ಲಿಯೂ ಮುಕ್ತಿಯನ್ನು ಹೊಂದಿದರು. ಅವರಿಗೆ ನಮಸ್ಕಾರವು. || ೬-೧೦ ||

ಸಿದ್ಧವರ ಕೂಟದಲ್ಲಿ ಇಬ್ಬರು ಚಕ್ರವರ್ತಿಗಳೂ ಹತ್ತು ಜನ ಕಾಮದೇವರೂ ಅನೇಕ ಮುನಿಗಳೂ ಮುಕ್ತರಾದರು. ಚೂಲಗಿರಿ ಯಲ್ಲಿ ಇಂದ್ರಜಿತು ಕುಂಭಕರ್ಣರೂ ಪಾವಾಗಿರಿಯಲ್ಲಿ ಸುವರ್ಣ ಭದ್ರರೇ ಮೊದಲಾದ ನಾಲ್ವರು ಮುನಿಗಳೂ ದ್ರೋಣ ಪರ್ವತದಲ್ಲಿ ಗುರುದತ್ತ ಮುನಿಗಳೂ ಕೈಲಾಸದಲ್ಲಿ ನಾಗ ಕುಮಾರ, ವಾಲಿ, ಮಹಾವಾಲಿ ಮುನಿಗಳೂ ಮುಕ್ತಿ ಹೊಂದಿದರು. ಅವರಿಗೆ ನಮ ಸ್ಕಾರವು. || ೧೧-೧೫ ||

ಮುಕ್ತಾಗಿರಿಯಲ್ಲಿ ಮೂರುವರಿ ಕೋಟಿ ಮುನಿಗಳೂ, ಕುಂಥು ಗಿರಿಯಲ್ಲಿ ಕುಲ ಭೂಷಣ ದೇಶ ಭೂಷಣ ಮುನಿಗಳೂ ಕೋಟಿ ಶಿಲೆಯಲ್ಲಿಯ ಯಶೋಧರನ ಐನೂರು ಮಕ್ಕಳೂ ಉಳಿದ ಮುನಿ ಗಳೂ ವೇಸಿಂದ ಪರ್ವತ ಸಿಖರದಲ್ಲಿ ವರದತ್ತ ಮೊದಲಾದ ಮುನಿ ಗಳೂ ಮಂಗಲಾಪುರದಲ್ಲಿ ಪ್ರಸಿದ್ಧರಾದ ಪಾರ್ಶ್ವನಾಥ ಅಭಿನಂದನ ರೂ ಆದರಂತೆ ಆಶಾರಮ್ಯನಗರದಲ್ಲಿ ಪ್ರಸಿದ್ಧಿಹೊಂದಿದ ಮುನಿ ಸುವ್ರತರನ್ನು ವಂದಿಸುವೆ || ೧೬-೨೦ ||

ಪೌದನಪುರದಲ್ಲಿ ಬಾಹುಬಲಿ, ಹಸ್ತಿನಾಪುರದಲ್ಲಿ ಶಾಂತಿ, ಕುಥು ಅರಹತೀರ್ಥಂಕರರೂ. ಕಾಶಿಯಲ್ಲಿ ಸುಪಾರ್ಶ್ವ, ಪಾರ್ಶ್ವ ತೀರ್ಥಂಕರ ರೂಪ್ರಸಿದ್ಧಿಹೊಂದಿದರು. ಮಥುರೆಯಲ್ಲಿ ವ ಹಾವೀರರೂ. ಅಹಿಛತ್ರ ದಲ್ಲಿ ಪಾರ್ಶ್ವನಾಥರೂ ಪ್ರಸಿದ್ಧಿಹೊಂದಿದರು. ಜಂಬುವನದಲ್ಲಿ

ಮುನೀಶ್ವರರು ಮುಕ್ತಿಯನ್ನು ಹೊಂದಿದರು. ಇವರಿಗೆ ನಮಸ್ಕರಿಸುವೆ. || ೨೧-೨೨ ||

ಪಂಚಕಲ್ಯಾಣಗಳಾದ ಸ್ಥಾನಗಳಿಗೆ ವಂದಿಸುವೆ. ವರನಗರ ದಲ್ಲಿ ಅರ್ಗಲದೇವನೂ ಶ್ರೀಪುರದಲ್ಲಿ ಪಾರ್ಶ್ವರೂ ಪ್ರಸಿದ್ಧಿಗೆ ಬಂದರು. ಗೋಮಟ ದೇವನ ಮೇಲೆ ದೇವತೆಗಳು ಕುಸುಮ ವೃಷ್ಟಿ ಸುರಿಸುವರು. ಎಲ್ಲ ಅತಿಶಯ ಸ್ಥಾನಗಳಿಗೆ ನನ್ನ ನಮಸ್ಕಾರವು. ಈ ನಿರ್ವಾಣ ಕಾಂಡವನ್ನು ಪಠಿಸುವವನು ಸುಖವನ್ನು ಅನುಭವಿಸಿ ಮುಕ್ತಿಯನ್ನು ಹೊಂದುತ್ತಾನೆ. || ೨೩-೨೭ ||

## ಸಂಸ್ಕೃತ ಪದ್ಯಗಳು

ಚಂದ್ರಗುಹೆಯಲ್ಲಿರುವ ಅಕ್ಷರ ಶಿಲೆಯನ್ನೂ ವಸ್ತ್ರಾವತಾರ ತೀರ್ಥವನ್ನೂ ಚಣಗುಹೆಯಲ್ಲಿರುವ ಚಾರಣ ಪಾದುಕೆಯನ್ನು ಪೂಜಿಸುತ್ತೇನೆ. ಧರ್ಮಶಿಲೆ ಸಮ್ಯಜ್ಞಾನಶಿಲೆ, ನೇಮಿನಿಲಯ, ಶೃಂಗ ತ್ರಯಗಳಿಗೆ ವಂದಿಸುತ್ತೇನೆ. || ೧ ||

ವೃಷಭ ತೀರ್ಥಂಕರರ ಸಮವಸರಣವು ಹನ್ನೆರಡು ಯೋಜನ ಪರಿಮಿತವಾಗಿದ್ದಿತು. ಮುಂದೆ ನೇಮಿ ತೀರ್ಥಂಕರರವರೆಗೆ ಅರ್ಧಾರ್ಧ ಯೋಜನೆಯಂತೆ ಕಡಿಮೆಯಾಗುತ್ತ ಬಂತು. ಪಾರ್ಶ್ವ ಜಿನರದು ೧¼ ಯೋಜನ ಅಳತೆಯದಾಯಿತು. ಮಹಾವೀರ ಜಿನನದು ಒಂದು ಯೋಜನ ಪರಿಮಾಣವುಳ್ಳದ್ದು. || ೨ ||

ವೃಷಭ ೫೦೦ ಧನುಸ್ಸು ಎತ್ತರ. ಆ ಮೇಲೆ ಮುಂದಿನ ಎಂಟು ಜನ ತೀರ್ಥಂಕರರ ಅಳತೆ ಕ್ರಮದಿಂದ ೫೦ ರಂತೆ, ಮುಂದೆ ಐವರಿಗೆ ೧೦ ರಂತೆ, ಮುಂದೆ ಎಂಟು ಜನರಿಗೆ ೫ ರಂತೆ ಕಡಿಮೆ ಯಾಗುತ್ತ ಹೋಗುವುದು. ಪಾರ್ಶ್ವ ಮಹಾವೀರರು ಕ್ರಮವಾಗಿ ೯, ೭ ಹಸ್ತ ಪರಿಮಿತಿಯುಳ್ಳವರು. || ೩ ||

ಚಂದ್ರಪ್ರಭ ಪುಷ್ಪದಂತರು ಮಲ್ಲಿಗೆ ಹೂವಿನಂತೆ ಪದ್ಮಪ್ರಭ ವಾಸು ಪೂಜ್ಯ ಕೆಂದಾವರೆಯಂತೆ,ಪಾರ್ಶ್ವ ಸುಪಾರ್ಶ್ವರು ಪಚ್ಚೆಯಂತೆ ಉಳಿದ ಹದಿನಾರು ಜನರು ಸುವರ್ಣ ವರ್ಣದವರು ಇದ್ದರು. ವಾಸು

ಪೂಜ್ಯ, ಮಲ್ಲಿ, ನೇಮಿ, ಪಾರ್ಶ್ವ, ಮಹಾವೀರರು ಬಾಲಬ್ರಹ್ಮಚಾರಿಗಳಾಗಿ ದೀಕ್ಷೆತಕೊಂಡರು. ಉಳಿದವರು ಗ್ರಹಸ್ಥರಾಗಿ ಸನ್ಯಾಸ ಸ್ವೀಕರಿಸಿದರು. ವೃಷಭ, ವಾಸುಪೂಜ್ಯ ನೇಮಿ ಇವರು ಪರ್ಯಂಕಾಸನದಲ್ಲಿಯೂ ಉಳಿದವರು ಕಾಯೋತ್ಸರ್ಗದಲ್ಲಿಯೂ ಮುಕ್ತಿಯನ್ನು ಹೊಂದಿದರು. ಕ್ರಮವಾಗಿ ಎತ್ತು, ಆನೆ, ಕುದುರೆ ಕಪಿ, ಚಕ್ರವಾಕ, ತಾವರೆ, ಸ್ವಸ್ತಿಕ, ಚಂದ್ರ, ಮೊಸಳೆ, ಶ್ರೀವೃಕ್ಷ, ಗೇಂಡಾಮೃಗ, ಕೋಣ, ಹಂದಿ, ಮುಳ್ಳುಹಂದಿ, ವಜ್ರ, ಹರಿಣ, ಆಡು, ಮೀನು, ಕಲಶ, ಆಮೆ, ಕನ್ನೈದಿಲೆ, ಶಂಖ, ಸರ್ಪ, ಸಿಂಹ ಇವು ತೀರ್ಥಂಕರರ ಲಾಂಛನಗಳು. ಶಾಂತಿ, ಕುಂಥು, ಅರ, ಇವರು ಕುರುವಂಶೀಯರು. ನೇಮಿ, ಮುನಿಸುವ್ರತರು ಯದು ವಂಶೀಯರು ಪಾರ್ಶ್ವರು ಉಗ್ರ, ಮಹಾವೀರರು ನಾಥ ವಂಶೀಯರಾಗಿದ್ದರು. ಉಳಿದವರು ಇಕ್ಷ್ವಾಕು ವಂಶದವರು. || ೪-೯ ||

## ನಂದೀಶ್ವರ ಭಕ್ತಿ

ಪವಿತ್ರವಾದ ಚೈತ್ಯಾಲಯಗಳಿಗೆ ವಂದಿಸಿ, ಸ್ತುತಿಸುತ್ತೇನೆ. ಭವನವಾಸಿ ದೇವತೆಗಳ ಗೃಹದಲ್ಲಿ ಏಳು ಕೋಟಿ ಎಪ್ಪತ್ತೆರಡು ಲಕ್ಷ ಅದರಂತೆ ವ್ಯಂತರರಿಂದಲೂ ಸ್ತುತಿಸಲ್ಪಟ್ಟ ಅನೇಕ ಜಿನ ಮಂದಿರಗಳಿರುತ್ತವೆ. ಮಾನವಲೋಕದಲ್ಲಿ ನಾನೂರಾ ಐವತ್ತೆಂಟು ಜಿನ ಮಂದಿರ ವಿರುತ್ತವೆ. ಇವನ್ನುಳಿದು ಉಳಿದ ಜಿನ ಮಂದಿರಗಳು ( ೮೫೬೯೭೪೮೧ ) ಇರುತ್ತವೆ. || ೧-೯ || ಈ ಮಂದಿರಗಳಲ್ಲಿ ದೇವೇಂದ್ರನು ಪರ್ವತಿಥಿಗಳಲ್ಲಿ ಜಿನಪೂಜೆಯನ್ನು ಮಾಡುವನು. ಈ ಮಂದಿರಗಳು ಅಕೃತ್ರಿಮವಾಗಿವೆ.

ಮುಂದಿನ ಪದ್ಯಗಳಲ್ಲಿ ಯಾವ ಯಾವ ತೀರ್ಥಂಕರರು ಎಲ್ಲಿ ಎಲ್ಲಿ ಮುಕ್ತರಾದರೆಂಬ ವಿಷಯ ಬಂದಿದೆ. ಅಲ್ಲಿಂದ ಮುಂದೆ ತೀರ್ಥಂಕರರಿಗಿರುವ ಹದಿನಾಲ್ಕು ಅತಿಶಯಗಳನ್ನು ಎಂಟು ಪ್ರಾತಿಹಾರ್ಯಗಳನ್ನೂ ವರ್ಣಿಸಲಾಗಿದೆ. ಇವೆಲ್ಲ ಇದ್ದಂತಹ ತೀರ್ಥಂಕರರಿಗೆ ನಮಸ್ಕಾರವು.

## ಚೈತ್ಯಭಕ್ತಿ

ಜಿನನು ಶ್ರೇಷ್ಠನಾದ ದೇವನು. ಅವನು ಬೋಧಿಸಿದ ಧರ್ಮವು ಅತ್ಯಂತ ಶ್ರೇಷ್ಠವಾದುದು. ಕೇವಲ ಜ್ಞಾನವು ಮೋಕ್ಷಕೊಡುವಂತಹದು. ಪಂಚಪರಮೇಷ್ಠಿಗಳಿಗೆ ನಮಸ್ಕಾರವು. ಜಿನಧರ್ಮ, ಜೈನ ಶಾಸ್ತ್ರ ಜಿನಬಿಂಬ ಜಿನಚೈತ್ಯಾಲಯ, ರತ್ನತ್ರಯಗಳನ್ನು ವರ್ಣಿಸುತ್ತೇನೆ. ಹಾಗೂ ವಂದಿಸುತ್ತೇನೆ. ಇದರಂತೆಯೇ ತಿರ್ಯಕ್‌ವ್ಯಂತರ ಮೊದಲಾದ ಲೋಕಗಳಲ್ಲಿಯ ಜಿನಮಂದಿರಗಳಿಗೂ ನನ್ನ ನಮಸ್ಕಾರವು. ಜಿನಧರ್ಮವು ಪವಿತ್ರವಾದುದು. ಮುಕ್ತಿಯನ್ನು ಕೊಡುವಂತಹದು ಇರುತ್ತದೆ. ಎಲ್ಲ ಲೋಕದ ಚೈತ್ಯಾಲಯಗಳಿಗೆ ನಮಸ್ಕರಿಸುತ್ತೇವೆ.

## ಪಂಚಗುರುಭಕ್ತಿ

ದೇವೇಂದ್ರನಿಂದ ವಂದಿಸಲ್ಪಡುವ ತೀರ್ಥಂಕರರಿಗೂ ಎಂಟು ಗುಣಗಳಿಂದ ಕೂಡಿದ ಸಿದ್ಧರಿಗೂ ಮಹಾಚಾರಿತ್ರ್ಯ ತತ್ಪರರಾದ ಆಚಾರ್ಯರಿಗೂ ಮಿಥ್ಯಾವಾದಿಗಳಿಗೆ ಭಯಂಕರರಾದ ಉಪಾಧ್ಯಾಯರಿಗೂ ಜ್ಞಾನಿಗಳಾದ ಸರ್ವಸಾಧುಗಳಿಗೂ ಭಕ್ತಿಯಿಂದ ನಮಸ್ಕರಿಸುತ್ತೇನೆ. ಈ ಪಂಚ ನಮಸ್ಕಾರವು ಕರ್ಮವನ್ನು ನಷ್ಟಗೊಳಿಸುವುದು. ಪ್ರಾತಿಹಾರ್ಯಗಳಿಂದ ಜಿನೇಶ್ವರನನ್ನು ಎಂಟು ಗುಣಗಳಿಂದ ಸಿದ್ಧಪರಮೇಷ್ಠಿಗಳನ್ನೂ ಎಂಟು ಪ್ರವಚನ ಮಾತೃಕೆಗಳಿಂದ ಆಚಾರ್ಯರನ್ನೂ ವಿನಯದಿಂದ ಉಪಾಧ್ಯಾಯರನ್ನೂ ಪ್ರಾಣಾಯಾಮ, ಧ್ಯಾನ, ಧಾರಣ, ಪ್ರತ್ಯಯ, ಆಹಾರ, ಯಮ, ನಿಯಮ, ಆಸನಗಳೆಂಬ ಯೋಗಾಂಗಳಿಂದ ಸಾಧುಗಳನ್ನೂ ಸ್ತುತಿಸುವೆ.

## ತೀರ್ಥಂಕರಭಕ್ತಿ

ವೃಷಭನಿಂದ ಮಹಾವೀರನವರೆಗಿನ ಎಲ್ಲ ತೀರ್ಥಂಕರರಿಗೂ ವಂದಿಸುವೆ. ತೀರ್ಥಂಕರರಿಗೆ ಸಾವಿರದೆಂಟು ಶುಭಲಕ್ಷಣಗಳಿರುತ್ತವೆ. ಅವರು ಸಂಸಾರ ಪರಂಪರೆಯನ್ನು ನಷ್ಟಮಾಡಿರುತ್ತಾರೆ. ದೇವತೆಗಳಿಂದ ಪೂಜನೀಯರಿರುತ್ತಾರೆ. ಇಂಥವರ ಪಾದ ಕಮಲಗಳಿಗೆ ಭಕ್ತಿಯಿಂದ ನಮಸ್ಕರಿಸುವೆ.

## ಶಾಂತ್ಯಷ್ಟಕ

ಭಗವಂತನೆ ! ಸಂಸಾರದುಃಖಕ್ಕೆ ಬೇಸತ್ತು ಜನರು ನಿನಗೆ ಶರಣು ಬರುವರು. ಪ್ರೀತಿಯಿಂದಲ್ಲ. ನಿನ್ನ ಸ್ತೋತ್ರದಿಂದ ಮಾನವನ ವಿಘ್ನಗಳು ನಷ್ಟವಾಗುವವು. ಸಂಸಾರವೆಂಬ ಕಿಚ್ಚನ್ನು ಆರಿಸಲು ಜಿನಸ್ತುತಿಯೆಂಬ ನದಿಯು ಸೇರಬೇಕು. ಸಿಂಹದ ಧ್ವನಿಗೆ ಕಾಡಾನೆಗಳು ಮದರಹಿತವಾಗುವಂತೆ ನಿನ್ನ ಸ್ತುತಿಯಿಂದ ರೋಗ ಪರಿಹಾರವಾಗುವದು. ನಿತ್ಯ ಸುಖ ಸಿಗುವದು. ಸುರ್ಯೋದಯದವರೆಗೆ ತಾವರೆಯು ಮುಚ್ಚಿರುವಂತೆ ಜಿನಭಕ್ತಿಯುಂಟಾಗುವವರೆಗೆ ಮಾತ್ರ ಮಾನವನಲ್ಲಿ ಪಾಪವಿರುತ್ತದೆ. ಶಾಂತಿ ಜಿನನೆ, ನನಗೆ ಶಾಂತಿಯನ್ನು ಕೊಟ್ಟು ನಿರ್ಮಲನನ್ನಾಗಿ ಮಾಡು.

## ಶಾಂತಿಭಕ್ತಿ

ಚಕ್ರವರ್ತಿಗಳಲ್ಲಿ ಐದನೆಯವರೂ ತೀರ್ಥಂಕರರಲ್ಲಿ ಹದಿನಾರನೆಯವರೂ ಆದ ಶಾಂತಿನಾಥ ತೀರ್ಥಂಕರರಿಗೆ ವಂದನೆಯು.

ಶಾಂತಿಃ ಶಿರೋಧೃತ ಜಿನೇಶ್ವರ ಶಾಸನಾನಾಂ ।
ಶಾಂತಿ ನಿರಂತರ ತಪೋಭರ ಭಾವಿತಾನಾಂ ॥
ಶಾಂತಿಃ ಕಷಾಯ ಜಯ ಜೃಂಭಿತ ವೈಭವಾನಾಂ ।
ಶಾಂತಿಃ ಸ್ವಭಾವ ಮಹಿಮಾನಮುಪಾಗತಾನಾಂ ॥ ೧ ॥

ಜೀವಂತು ಸಂಯಮ ಸುಧಾರಸ ಪಾನ ತೃಪ್ತಾಃ
ನಂದಂತು ಶುದ್ಧ ಸಹಸೋದಯ ಸುಪ್ರಸನ್ನಾಃ ॥
ಸಿದ್ಧ್ಯಂತು ಸಿದ್ಧಸುಖಸಂಗ ಕೃತಾಭಿಯೋಗಾಃ ।
ತೀವ್ರಂ ತಪಂತು ಗಜತಾಂ ತ್ರಿತಯೇರ್ಹದಾಜ್ಞಾಃ ॥ ೨ ॥

ಶಾಂತಿಃ ಶಂ ತನುತಾಂ ಸಮಸ್ತ ಜಗತಃ ಸಂಘುಷ್ಟತಾಂ ಧಾರ್ಮಿಕೈಃ ।
ಶ್ರೇಯಃ ಶ್ರೀ ಪರಿವರ್ಧತಾಂ ನಯಧುರೋ ಧುರ್ಯೋಧರಿತ್ರೀಪತಿಃ ॥
ಸದ್ವಿದ್ಯಾರಸಮುದ್ಗಿರಂತು ಕವಯೋ ನಾಮಾಪ್ಯಘಸ್ಯಾಸ್ತು ಮಾ ।
ಪ್ರಾರ್ಥ್ಯಂ ವಾ ಕಿಯದೇಕ ಏವ ಶಿವಕೃದ್ಧರ್ಮೋ ಜಯತ್ವರ್ಹತಾಂ ॥ ೩ ॥

ಜನ್ಮ ಜರಾ ಮೃತ್ಯುರೂಪವಾದ ತಾಪತ್ರಯಗಳಿಂದ ಮುಕ್ತರೂ ಶಾಂತಿಯನ್ನು ಕೊಡುವಂತಹರೂ ಆದ ಶಾಂತಿಜಿನರನ್ನು ವಂದಿಸುತ್ತೇನೆ.

## ಸಮಾಧಿಭಕ್ತಿ

ಆತ್ಮಾನುಭವವನ್ನು ಮಾಡಿಕೊಳ್ಳುವ ಜ್ಞಾನವೇ ಲಕ್ಷಣವಾಗಿರುವ ಜಿನನನ್ನು ಮೊದಲು ಪರೋಕ್ಷಜ್ಞಾನದಿಂದಲೂ ಆ ಮೇಲೆ ಪ್ರತ್ಯಕ್ಷಜ್ಞಾನದಿಂಲದೂ ಕಾಣುತ್ತೇನೆ. ಜಿನಸ್ತುತಿ, ಶಾಸ್ತ್ರಾಭ್ಯಾಸ, ಸತ್ಸಂಗ, ಗುಣಕಥನ, ದೋಷದಲ್ಲಿ ಮೌನಗಳು ಲಭಿಸಲಿ. ಸತ್ಯ ಶಾಸ್ತ್ರದಲ್ಲಿ ವಿಶ್ವಾಸವಿರಲಿ. ಸಮಾಧಿಮರಣ ಬರಲಿ. ಜಿನನ ಸ್ಮರಣವು ಮುಕ್ತಿಯನ್ನು ಕೊಡುವದು. ತೀರ್ಥಂಕರರನ್ನು, ರತ್ನತ್ರಯಗಳನ್ನು ಐವರು ಗುರುಗಳನ್ನು ವಂದಿಸುವೆ. " ಅರ್ಹಂ " ಇದು ಬೀಜಮಂತ್ರವಿದ್ದಂತಿದೆ. ಸಿದ್ಧರಿಗೆ ನಮಸ್ಕರಿಸುವೆ. ಪಂಚನಮಸ್ಕಾರರೂಪವಾದ ದೇವಿಯು ನನ್ನನ್ನು ಕಾಪಾಡಲಿ. ಜಿನನ ಸ್ಮರಣೆಯೇ ನನಗೆ ಶರಣವು. ವೀತರಾಗನನ್ನುಳಿದು ರಕ್ಷಕರಾರೂ ಇಲ್ಲ. ಜಿನೇಶ್ವರನ ಭಕ್ತಿ ನನಗಿರಲಿ. ಇದನ್ನೇ ನಾನು ಯಾವಾಗಲೂ ಬೇಡುತ್ತೇನೆ.

## ವೀರಭಕ್ತಿ

ಸರ್ವಜ್ಞಸ್ವರೂಪನಾದ ಮಹಾವೀರನಿಗೆ ನಮಸ್ಕಾರವು. ವೀರ ಪ್ರಭುವು ದೇವತೆಗಳಿಂದಲೂ ನಮಸ್ಕಾರಕ್ಕೆ ಯೋಗ್ಯನು. ತಪಸ್ವಿಯು. ಧರ್ಮತೀರ್ಥನು, ಸಂಸಾರಬಂಧವನ್ನು ನಷ್ಟಪಡಿಸುವಂತಹನು. ಪಾಪ ಕತ್ತಲೆಗೆ ಸೂರ್ಯನಿದ್ದಂತೆ. ಧರ್ಮವು ಸುಖವನ್ನೂ ಹಿತವನ್ನೂ ಉಂಟು ಮಾಡುವದು. ಅದರ ರಕ್ಷಕನು ವರ್ಧಮಾನ ಜಿನನು.

## ತತ್ವಾರ್ಥ ಸೂತ್ರ

ಮೋಕ್ಷಕ್ಕೆ ಒಯ್ಯುವಂತಹನೂ ಕರ್ಮವನ್ನು ನಷ್ಟಪಡಿಸುವಂತಹನೂ ವಿಶ್ವತತ್ವವನ್ನು ತಿಳಿಯುವಂತಹನೂ ಆದ ಜಿನನಿಗೆ ಅವನ್ನಗುಣಗಳನ್ನು ಸಂಪಾದಿಸಲಿಕ್ಕೆಂದು ನಮಸ್ಕಾರವು.

ಸಮ್ಯಗ್ದರ್ಶನ ಜ್ಞಾನಚಾರಿತ್ರವು ಮೋಕ್ಷಮಾರ್ಗವು. ದಇರಲ್ಲಿ ತತ್ವದಲ್ಲಿ ಶ್ರದ್ಧೆಯನ್ನು ಇಡುವದೇ ಸಮ್ಯಗ್ದರ್ಶನವು. ಇದು ಎರಡು ವಿಧವಾದುದು. ಒಂದು ಸ್ವಭಾವತಃ ಬಂದುದು. ಇನ್ನೊಂದು ಅನ್ಯರ ಪ್ರೇರಣೆಯಿಂದ ಉಂಟಾದುದು.

ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ಎಂಬ ಏಳು ಪದಾರ್ಥಗಳು ಇವೆ. ನಾಮ, ಸ್ಥಾಪನಾ, ದ್ರವ್ಯ, ಭಾವ, ಈ ನಾಲ್ಕರ ಯೋಗದಿಂದ ಸಮ್ಯಗ್ದರ್ಶನದ ಹಿನ್ನೆಲೆ ಸಿದ್ಧವಾಗುವದು. ಪ್ರತ್ಯಕ್ಷ ಪರೋಕ್ಷ ಪ್ರಮಾಣಗಳಿಂದಲೂ ಶಾಸ್ತ್ರಗಳ ಆಧಾರದಿಂದಲೂ ಪದಾರ್ಥಗಳ ಜ್ಞಾನವಾಗುವದು. ಈ ಜ್ಞಾನ ಸಾಧನೆಗೆ ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿ, ಮತ್ತು ವಿಧಾನಗಳೆಂದು ಆರು ಅಂಗಗಳು. ಇವುಗಳಲ್ಲಿಯೂ ಸಂಖ್ಯಾ, ಕ್ಷೇತ್ರ, ಸ್ಪರ್ಶ, ಅಂತರ, ಭಾವ, ಇತ್ಯಾದಿ ಎಂಟು ಉಪಾಂಗಗಳಿವೆ. ಇವುಗಳಿಂದ ಸಂಪಾದಿಸಿದ ಜ್ಞಾನವು ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲಗಳೆಂದು ಐದು ವಿಧವಾದವು. ಇವುಗಳಲ್ಲಿ ಮೊದಲಿನವೆರಡು ಪರೋಕ್ಷವೂ ಉಳಿದವು ಪ್ರತ್ಯಕ್ಷವೂ ಆಗಿವೆ.

ಮತಿಜ್ಞಾನವು ಇಂದ್ರಿಯ ಹಾಗು ಮನಸ್ಸುಗಳ ಮುಖಾಂತರ ಆಗುತ್ತದೆ. ಈ ಜ್ಞಾನದಲ್ಲಿ ಅವಗ್ರಹ, ಈಹಾ, ಅವಾಯ, ಧಾರಣ ಗಳೆಂದು ನಾಲ್ಕು ಭೇದಗಳಿವೆ. ಈ ಪ್ರತಿಯೊಂದು ಅಂಗವೂ ವಸ್ತುವಿನ ಜ್ಞಾನಮಾಡಿಕೊಳ್ಳುವಾಗ ಬಹುವಿಧ ಕ್ಷಿಪ್ರ,ಅನಿಸ್ಸೃತ, ಅನುಕ್ತ ಧ್ರುವ ಇವುಗಳವಿರುದ್ಧ ಆರುಹೀಗೆ ಹನ್ನೆರಡು ಪ್ರಕಾರಗಳಿಂದ ನಿರೀಕ್ಷಿಸಿ ನಿರ್ಣಯಕ್ಕೆ ಬರುತ್ತದೆ. ಈ ಹನ್ನೆರಡು ವಿಧದ ನಿರೀಕ್ಷಣೆಯೂ ಇಂದ್ರಿಯ ಜ್ಞಾನಕ್ಕೆ ಸಂಬಧ ಪಟ್ಟದ್ದು. ಅಪ್ರಕಟಜ್ಞಾನಕ್ಕೆ ಈ ನಿರೀಕ್ಷಣೆ ಉಪಯೊಗವಿಲ್ಲ. ಅಪ್ರಕಟವಾದುದು ಅವಗ್ರಹದಲ್ಲಿ ಬರುತ್ತದೆ. ಆದರೂ ಕಣ್ಣುಮನಗಳಿಗೆ ವ್ಯಂಜನಾವ್ಯಗ್ರಹ ಆಗದು.

ಮತಿಜ್ಞಾನವಾದನಂತರ ಶ್ರುತಜ್ಞಾನವಾಗುವದು. ಇದರಲ್ಲಿ ಅಂಗಬಾಹ್ಯ, ಅಂಗಪ್ರವಿಷ್ಟ ಎಂದು ಎರಡು ಮುಖ್ಯ ಅಂಗಗಳು. ಅಲ್ಲದೆ ಇನ್ನೂ ಅನೇಕ ಅಂಗೋಪಾಂಗಗಳಿಂದ ಈ ಶ್ರುತಜ್ಞಾನ ಕೂಡಿದೆ.

ದೇವ, ನಾರಕಿಗಳಿಗೆ ಭವಪ್ರತ್ಯಯ ಅವಧಿಜ್ಞಾನವಿರುತ್ತದೆ. ಜ್ಞಾನಾವರಣ ಕರ್ಮ ಕ್ಷಯದಿಂದ ಅವಧಿಜ್ಞಾನವಾಗುವದು; ಇದು ಮಾನವ ತೀರ್ಯಕ್ ಜೀವಿಗಳಿಗೂ ಆಗುತ್ತದೆ.

ಮನಃಪರ್ಯಾಯ ಜ್ಞಾನದಲ್ಲಿ ಋಜುಮತಿ, ವಿಪುಲಮತಿ, ಎಂದು ಎರಡು ಭೇದಗಳು. ಇವುಗಳಲ್ಲಿ ಋಜುಮತಿಜ್ಞಾನವು ಮಾನವನಿಗೆ ಉಂಟಾಗಿ ಮತ್ತೆ ನಷ್ಟವಾಗಲೂಬಹುದು. ಆದರೆ ವಿಪುಲಮತಿ ಹಾಗಲ್ಲ. ವಿಪುಲಮತಿಯಾದರೆ ಮಾನವನಿಗೆ ಕೇವಲ ಜ್ಞಾನವಾಗುವದು. ಅದರಿಂದ ಋಜುಮತಿಗಿಂತ ವಿಪುಲಮತಿಯು ಶುದ್ಧವೂ ಶ್ರೇಷ್ಠವೂ ಆಗಿದೆ.

ಅವಧಿ ಮನಃಪರ್ಯಾಯ ಜ್ಞಾನಗಳಲ್ಲಿಯೂ ಶುದ್ಧತೆ, ಕ್ಷೇತ್ರ ಸ್ವಾಮಿತ್ವಗಳ ದೃಷ್ಟಿಯಿಂದ ಭಿನ್ನತೆಯಿರುತ್ತದೆ. ಮತಿಶ್ರುತಜ್ಞಾನ ಗಳು ದ್ರವ್ಯದ ಕೆಲವು ಭಾಗವನ್ನಷ್ಟೇ ತಿಳಿದು ಕೊಳ್ಳುತ್ತವೆ. ಅವಧಿ ಜ್ಞಾನವು ಮೂರ್ತವನ್ನು ಅರಿಯುತ್ತದೆ. ಮೂರ್ತದ ಅನಂತತೆ ಯನ್ನು ಮನಃ ಪರ್ಯಾಯ ಜ್ಞಾನವು ಗಮನಿಸುತ್ತದೆ. ಕೇವಲ ಜ್ಞಾನವು ಎಲ್ಲ ಪದಾರ್ಥಗಳನ್ನು ಎಲ್ಲ ಕಾಲದಲ್ಲಿಯೂ ತಿಳಿ ಯುವ ಸಾಮರ್ಥ್ಯವುಳ್ಳದು.

ಒಂದು ಕಾಲದಲ್ಲಿ ಒಂದು ಜೀವಿಗೆ ಐದೂ ಜಾನಗಳು ಆಗು ವದಿಲ್ಲ. ಒಂದೇ ಸಮಯದಲ್ಲಿ ಮತಿ ಶ್ರುತಿ ಆಗಲು ಸಾದ್ಯವಿದೆ. ಅದರಂತೆ ಮತಿ ಶ್ರುತಿ ಅವಧಿ ಇಲ್ಲವೆ ಮತಿ ಶ್ರುತಿ ಮನಃಪರ್ಯಗಳು ಒಮ್ಮೆಲೇ ಉಂಟಾಗಲು ತಕ್ಕುವಿದೆ. ನಾಲ್ಕುಜ್ಞಾನಗಳು ಉದ್ಭವಿ ಸಿದಾಗ ಮತಿ, ಶ್ರುತಿ, ಅವಧಿ, ಮನಃಪರ್ಯಗಳು ಆಗುತ್ತವೆ ಕೇವಲ ಜ್ಞಾನ ಯಾವಾಗಲೂ ಒಂದೇ ಆಗತಕ್ಕದ್ದು. ಮತಿ, ಶ್ರುತಿ, ಅವಧಿ ಗಳು ವಿಕಲ್ಪತೆಯಿಂದ ಕೂಡಿಯೂ ಇರಬಹುದು. ಇದು ವ್ಯಕ್ತಿಯ ಮೇಲೆ ಅವಲಂಬಿಸಿದೆ.

ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿ ರೂಢ, ಏವಂಭೂತ, ಹೀಗೆ ನಯಮಗಳು ಏಳು ಇರುತ್ತವೆ.

೨

ಜೀವಕ್ಕೆ ಔಪಶಮಿಕ, ಕ್ಷಾಯಿಕ, ಮಿಶ್ರ, ಔದಯಿಕ, ಪಾರಿ ಣಾಮಿಕಗಳೆಂದು ಐದು ಭಾವಗಳಿರುತ್ತವೆ. ಔಪಶಮಿಕವುಸಮ್ಯಕ್ತ್ವ

ಚಾರಿತ್ರ್ಯಗಳೆಂದು ಎರಡುವಿಧವಾದುದು. ಕ್ಷಾಯಿಕಭಾವವು ಕೇವಲ ಜ್ಞಾನಲಾಭ, ಭೋಗ, ಉಪಭೋಗ, ವೀರ್ಯ, ಸಮ್ಯಕ್ತ್ವ, ಚಾರಿತ್ರ್ಯಗಳೆಂದು ಒಂಭತ್ತು ವಿಧವಾಗಿದೆ. ಮೊದಲ ನಾಲ್ಕು ಜ್ಞಾನಗಳೂ ಮೂರು ಅಜ್ಞಾನಗಳೂ. ಐದುಲಬ್ಧಿಗಳು ಅಲ್ಲದೆ ವೇದಕಸಮ್ಯಕ್ತ್ವ, ಸರಾಗ ಚಾರಿತ್ರ್ಯ, ಸಂಯಮಾಸಂಯಮಗಳು ಕೂಡಿ ಹನಿನೆಂಟು ಭೇದಗಳನ್ನು ಕ್ಷಯೋಪಶಮ ಭಾವದಲ್ಲಿ ಹೇಳಲಾಗಿದೆ. ಔದಾಯಿಕಭಾವದಲ್ಲಿ ನಾಲ್ಕುಗತಿ , ನಾಲ್ಕು ಕಷಾಯ, ಮೂರುಲಿಂಗ, ಆರು ಲೇಶ್ಯಾ ಅಲ್ಲದೆ ಮಿಥ್ಯಾದರ್ಶನ, ಅಜ್ಞಾನ, ಅಸಂಯುತ, ಅಸಿದ್ಧಗಳು ಸೇರಿ ಇಪ್ಪತ್ತೊಂದು ಭೇದಗಳು. ಪರಿಣಾಮಿಕ ಭಾವದಲ್ಲಿ ಜೀವತ್ವ ಭವ್ಯತ್ವ ಅಭವ್ಯತ್ವವೆಂದು ಮೂರು ಭೇದಗಳು.

ಉಪಯೋಗವೇ ಜೀವದ ಲಕ್ಷಣವು. ಇದರಲ್ಲಿ ಸಂಸಾರಿ, ಮುಕ್ತ ಎಂದು ಎರಡು ವಿಧಜೀವಗಳು. ಸಂಸಾರಿ ಜೀವಗಳಲ್ಲಿ ತ್ರಸ, ಸ್ಥಾವರವೆಂದೂ ಭೇದ. ಸ್ಥಾವರ ಐದುವಿಧ. ಎರಡರಿಂದ ಐದು ಇಂದ್ರಿಯಗಳುಳ್ಳ ಜೀವಿಗಳು ತ್ರಸದಲ್ಲಿ ಬರುತ್ತವೆ. ದ್ರವ್ಯೇಂದ್ರಿಯ ಭಾವೇಂದ್ರಿಯಗಳೆಂದು ಇಂದ್ರಿಯಗಳಲ್ಲಿ ಎರಡುವಿಧ. ಜೀವಿಗಳಲ್ಲಿ ಮಾನಸಿಕ ದೃಷ್ಟಿಯಿಂದಲೂ ಎರಡು ವಿಧ, ಮನಸ್ಸುಳ್ಳವು ಮನಸು ಇರದಂಥವು ಎಂದು. ಜೀವ ಸ್ಥೂಲದೇಹ ಬಿಟ್ಟಾಗ ಸೂಕ್ಷ್ಮದೇಹ ವೊಂದಿರುತ್ತದೆ. ಅದರಿಂದ ಪುನರ್ಜನ್ಮವಾಗುವವರಗಿನ ನಡುವಿನ ಅವಧಿಯಲ್ಲಿಯೂ ಆಸ್ರವ ಇರುತ್ತದೆ. ಜೀವದ ಗತಿಯು ಆಕಾಶದಲ್ಲಿರುತ್ತದೆ. ಮುಕ್ತಜೀವಗಳ ಗತಿಯು ಸರಳವಾಗಿರುತ್ತದೆ. ಸಂರಾರಿ ಜೀವಿಗಳು ತಿರುವು ಮುರುವಾಗಿ ಹೋಗುತ್ತವೆ. ಪುನರ್ ಜನ್ಮವು ಸಮ್ಮೂರ್ಛನ, ಗರ್ಭ, ಉಪಪಾದ ಎಂದು ಮೂರು ವಿಧ. ಈ ಜನ್ಮ ಯೋನಿಗಳು ಸಾಮಾನ್ಯವಾಗಿ ಒಂಭತ್ತುವಿಧವಾದಂಥವು. ಜರಾಯುಜ, ಅಂಡ, ಪೋತವೆಂದು ಜನ್ಮ ಮೂರು ವಿಧವಾಗಿವೆ. ದೇವ, ನಾರಕೀ ಜೀವಿಗಳು ಉಪಪಾದದಲ್ಲಿ ಜನಿಸುತ್ತವೆ. ಉಳಿದವು ಸಮ್ಮೂರ್ಛನದಲ್ಲಿ. ಸಂಸಾರಿಕ ಸುಖದುಃಖ ಭೋಗಿಸಲಿಕ್ಕೆ ಐದು ಪ್ರಕಾರದದೇಹಗಳು ಜೀವಿಗೆ ಇರುತ್ತವೆ. ಅವುಗಳಲ್ಲಿ ಔದಾರಿಕವೆಂಬ

ದೇಹ ನಮಗೆ ಕಾಣುವಂತಹದು ಉಳಿದವುಸೂಕ್ಷ್ಮವಿರುತ್ತವೆ. ಪ್ರದೇಶ ಗುಣಗಳೂ ಅನಂತಹಾಗುತ್ತವೆ. ತೈಜಸ, ಕರ್ಮಣ ದೇಹ ಸಂಬಂಧವು ಜೀವಿಗೆ ಅನಾದಿಯಾದುದು. ಇವು ಎಲ್ಲ ಸಂಸಾರಿಜೀವಿ ಗಳಿಗೆ ಇರುತ್ತವೆ. ವಿಗ್ರಹಗತಿಯಲ್ಲಿ ಕಾರ್ಮಣ ಶರೀರಕ್ಕೆ ಭೋಗ ವಿಲ್ಲ. ಔದಾರಿಕ ಶರೀರ ಜನ್ಮದಿಂದ ಬರುತ್ತದೆ. ವೈಕ್ರಿಯಕ ಶಾರೀರ ಉಪಪಾದ ಜನ್ಮದಿಂದ ಬರುತ್ತದೆ. ಮಾನವನಿಗೆ ಋದ್ಧಿಯಿಂದ ವೈಕ್ರಿಯಕ ಶರೀರ ಉಂಟಾಗುತ್ತದೆ. ತಪದ ಫಲದಿಂದ ತೈಜಸದೇಹ ಸಿಕ್ಕುತ್ತದೆ. ಆಹಾರಕಶರೀರವು ಒಂದು ಮೊಳ ಎತ್ತರವಿದ್ದು, ಸಮ ಚತುರಸ್ರ ಸಂಸ್ಥಾನವನ್ನು ಧಾರಣಮಾಡುತ್ತದೆ. ನಾರಕಿ, ಸಮ್ಮೂ ರ್ಛನ ಜೀವಿಗಳು ನಂಪುಸಕವಿರುತ್ತವೆ. ದೇವಭವದಲ್ಲಿ ಸ್ತ್ರೀಪುರುಷಗ ಳೆಂಬ ಎರಡೇ ಲಿಂಗಗಳು. ಉಳಿದ ಜೀವಿಗಳಿಗೆ ಮೂರು ಲಿಂಗಗಳು, ದೇವ, ನಾರಕಿ, ತದ್ಭವ ಮೋಕ್ಷಗಾಮಿ, ಭೋಗಭೂಮಿ ಜೀವಗಳ ಅಪಮೃತ್ಯುವಿಲ್ಲ. ಮನುಷ್ಯ ತೀರ್ಯರ್ಕ್ ಜೀವಿಗಳಿಗೆ ಅಪಮೃತ್ಯು ವಿದೆ.

೩

ಅಧೋಲೋಕದಲ್ಲಿ ರತ್ನಪ್ರಭಾ, ಶರ್ಕರಾ ಪ್ರಭಾ, ಪಂಕ ಪ್ರಭಾ, ಧೂಮ ಪ್ರಭಾ, ತಮಃ ಪ್ರಭಾ, ಮಹಾತಮಃ ಪ್ರಭಾ. ಹೀಗೆ ಒಂದರ ಕೆಳಗೊಂದು ಲೋಕಗಳಿದ್ದು ಮೂರು ವಾಯುಗಳ ಆಧಾರದಿಂದ ನಿಂತಿವೆ. ಎಲ್ಲ ನರಕಗಳಲ್ಲಿ ಕೂಡಿ ಎಂಬತ್ನಾಲ್ಕು ಲಕ್ಷ ಬಿಲಗಳಿವೆ. ಮೊದಲನೆಯ ನರಕದಲ್ಲಿ ಹದಿಮೂರು ಥರಗಳಿವೆ. ಮುಂದೆ ಪ್ರತಿಯೊಂದಕ್ಕೆ ಎರಡೆರಡರಂತೆ ಕಡಿಮೆ ಯಾಗುತ್ತ ಹೋಗುತ್ತವೆ. ನರಕದಲ್ಲಿ ಜನ್ಮಿಸಿರುವ ಜೀವಿಗಳ ಪರಿಣಾಮ ಕ್ರಿಯೆಗಳೆಲ್ಲ ಕೆಡಕಿನವಿರುತ್ತವೆ. ಅಲ್ಲಿಯ ಜೀವಿಗಳು ಒಂದಕ್ಕೊಂದು ತ್ರಾಸ ಕೊಡುತ್ತವೆ. ಅಸುರ ಕುಮಾರರು ನಾಲ್ಕು ನರಕಗಳಲ್ಲಿ ಹೋಗಿ ಅವರ ಪೂರ್ವ ಭವ ನೆನಪು ಕೊಟ್ಟು ಜಗಳವನ್ನೂ ಹಚ್ಚುವರು. ಇವರಿಂದ ಅವರಿಗೆ ಕಷ್ಟ ಉತ್ಪನ್ನವಾ

ಗುತ್ತದೆ. ಈ ಲೋಕಗಳಲ್ಲಿಯ ಜೀವಿಗಳ ಆಯುಷ್ಯವೂ ಬೇರೆ ಬೇರೆ ಪ್ರಮಾಣದಲ್ಲಿರುತ್ತದೆ.

ತಿರ್ಯಕ್ ಲೋಕದಲ್ಲಿ ಜಂಬು ಮೊದಲಾದ ದ್ವೀಪಗಳೂ ಲವಣಾವೇ ಮೊದಲಾದ ಸಾಗರಗಳೂ ಇವೆ. ಇವು ಒಂದಕ್ಕೊಂದು ಕಂಕಣಾಕೃತಿಯಲ್ಲಿ ಬಳಸಿಕೊಂಡಿವೆ. ಜಂಬೂ ದ್ವೀಪ ಲಕ್ಷ ಯೋಜನ ವಿಸ್ತಾರವಿದೆ. ಇದರಲ್ಲಿ ಭರತ, ಹೈಮವತ, ಹರಿ, ವಿದೇಹ ರಮ್ಯಕ, ಹೈರಣ್ಯವತ, ಐರಾವತ ಹೀಗೆ ಏಳು ಕ್ಷೇತ್ರಗಳಿವೆ. ಇವು ಗಳನ್ನು ವಿಭಾಗಿಸುವಂತಹ ಆರು ಕುಲಾಚಲಗಳಿವೆ. ಪ್ರತಿಯೊಂ ದರಮೇಲೂ ಒಂದೊಂದು ಹ್ರದ. ಅದರಲ್ಲಿ ಒಂದು ಕಮಲ ಹೀಗಿವೆ. ಆ ಕಮಲಗಳಲ್ಲಿ ಶ್ರೀ ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮೀ ಎಂಬ ದೇವತೆಗಳು ಇರುತ್ತಾರೆ ಎಲ್ಲ ಹ್ರದಗಳಿಂದ ಒಟ್ಟಿಗೆ ಹದಿನಾಲ್ಕು ನದಿಗಳು ಜನಿಸಿವೆ. ಇವು ಪೂರ್ವ ಪಶ್ಚಿಮ ಸಮುದ್ರಗಳಿಗೆ ಹೋಗಿ ಕೂಡುತ್ತವೆ. ಇವುಗಳಿಗೆ ಏಷ್ಟೋ ಉಪನದಿಗಳೂ ಬಂದು ಕೂಡಿವೆ. ಭರತ ಐರಾವತ ಕ್ಷೇತ್ರಗಳಲ್ಲಿ ಉತ್ಸರ್ಪಣಿ ಅವಸರ್ಪಿಣಿ, ಕಾಲಗಳ ಚಕ್ರ ನಡೆಯುತ್ತದೆ. ಉಳಿದ ಕ್ಷೇತ್ರಗಳಲ್ಲಿ ಒಂದೇ ತರದ ಸ್ಥಿತಿ ಇರುತ್ತದೆ. ಆದರೆ ಜನರ ಆಯುಪ್ರಮಾಣದಲ್ಲಿ ಹೆಚ್ಚು ಕಡಿಮೆಯಿದೆ. ಮಾನುಷೋತ್ತರ ಪರ್ವತದ ವರೆಗೆ ಎರುಡುವರೆ ದ್ವೀಪದಲ್ಲಿ ಮನುಷ್ಯರಿದ್ದಾರೆ. ಮುಂದೆಯಿಲ್ಲ. ಮಾನವರಲ್ಲಿ ಆರ್ಯ, ಮ್ಲೇಂಛರೆಂದು ಎರಡು ಭೇದಗಳು. ಒಟ್ಟಿಗೆ ನೂರಾಎಪ್ಪತ್ತು ಕರ್ಮ ಭೂಮಿಗಳಿವೆ. ಜನರ ಆಯುಷ್ಯ ಅಂತರ್ ಮುಹೂರ್ತದಿಂದ ಮೂರು ಪಲ್ಯದ ವರೆಗೂ ಇದೆ. ತಿರ್ಯಕ್ ಲೋಕದೊಳಗಿನ ಜೀವಿ ಗಳ ಆಯು ಪ್ರಮಾಣವೂ ಇದೇ ರೀತಿ ಇರುತ್ತದೆ.

ಳ

ದೇವತೆಗಳಲ್ಲಿ ನಾಲ್ಕು ಪ್ರಕಾರಗಳು. ಭವನವಾಸಿ, ವ್ಯಂತರ ಜ್ಯೋತಿಷ್ಕ ಈ ಮೂರು ಸಮೂಹದ ದೇವತೆಗಳಿಗೆ ನಾಲ್ಕು ಲೇಶ್ಯೆ

ಗಳಿರುತ್ತವೆ. ಈ ನಾಲ್ಕು ಪ್ರಕಾರಗಳಲ್ಲಿ ಅನೇಕ ಒಳವಿಭಾಗಗಳೂ ಇವೆ. ಈ ಪ್ರತಿಯೊಂದು ಒಳವಿಭಾಗಕ್ಕೂ ಇಂದ್ರರಿರುವರು. ಅವನನ್ನು ಹಿಡಿದು ಹತ್ತು ಪ್ರಕಾರದ ದೇವತೆಗಳು ಒಂದೊಂದು ವಿಭಾಗದಲ್ಲಿರುವರು. ವ್ಯಂತರ, ಜ್ಯೋತಿಷ್ಕ ದೇವತೆಗಳಲ್ಲಿ ಮಾತ್ರ ಎಂಟೇ ವಿಭಾಗಗಳು. ಕೆಲವು ಸ್ವರ್ಗಗಳಲ್ಲಿಯ ದೇವತೆಗಳು ಮಾನವರಂತೆಯೇ ಮೈಥುನ ಮಾಡುವರು. ಮತ್ತೆ ಕೆಲವು ಕಡೆಗೆ ಕೇವಲ ಅಂಗ ಸ್ಪರ್ಶದಿಂದಲೂ ಶೃಂಗಾರಚೇಷ್ಟೆಗಳಿಂದಲೂ ತೃಪ್ತಿ ಹೊಂದುತ್ತಾರೆ. ಅಲ್ಲದೆ ಸ್ತ್ರೀಪುರುಷರು ಪರಸ್ಪರ ನೆನೆದರೆ ಸಾಕು ತೃಪ್ತರಾಗುವ ವೃತ್ತಿಯೂ ಇದೆ. ಅಚ್ಯುತ ಸ್ವರ್ಗದಿಂದ ಮೇಲಿನವರಿಗೆ ವಿಷಯ ವೇದನೆಯಿರುವದಿಲ್ಲ. ನಿರಂತರ ಸುಖಿಗಳವರು.

ಜ್ಯೋತಿಷ್ಕ ದೇವರು ನಿರಂತರ ಮೇರುವನ್ನು ಸುತ್ತುತ್ತಿರುವರು. ಅವರಲ್ಲಿಯೇ ಸೂರ್ಯ, ಚಂದ್ರ, ತಾರೆಯರು ಬರುತ್ತಾರೆ. ಇವರಿಂದ ಕಾಲವಿಭಾಗವಾಗಿದೆ. ಇದು ಮಾನವ ಲೋಕದಲ್ಲಿಯದು. ಹೊರಗಿನ ಈ ದೇವತೆಗಳು ಸ್ಥಿರವಾಗಿದ್ದಾರೆ. ವಿಮಾನದಲ್ಲಿರುವವರು ವೈಮಾನಿಕರು. ಇವರಲ್ಲಿ ಕಲ್ಪೋಪಪನ್ನ, ಕಲ್ಪಾತೀತ ಎಂದು ಎರಡು ಪ್ರಕಾರಗಳು. ಕಲ್ಪ ಪಟಲಗಳುಳ್ಳಂಥವು. ಕೆಳಗಿನ ಪಟಲದ ದೇವತೆಗಳಿಗಿಂತ ಮೇಲಿನವರು ಶ್ರೇಷ್ಠರು ಐದನೆಯ ಸ್ವರ್ಗದ ಕೊನೆಯ ಭಾಗದಲ್ಲಿ ಲೌಕಾಂತಿಕ ದೇವರು ಇರುತ್ತಾರೆ. ಇವರಲ್ಲಿ ಇಪ್ಪತ್ತು ನಾಲ್ಕು ಭೇದಗಳು. ಕೆಲವು ದೇವತೆಗಳು ಮಾನವರಾಗಿ ಎರಡು ಭವದಲ್ಲಿ ಮುಕ್ತಿಯನ್ನು ಹೊಂದುವರು. ಕೆಲವರು ಒಂದೇ ಭವದಲ್ಲಿ ಪಡೆಯುವರು.

ದೇವ, ಮಾನವ, ನಾರಕಿ ಜೀವಿಗಳನ್ನು ಬಿಟ್ಟು ಉಳಿದವು ತಿರ್ಯಕ್ ಜೀವಿಗಳು. ಇವರೆಲ್ಲರ ಆಯು ಪ್ರಮಾಣವೂ ಬೇರೆ ಬೇರೆಯೇ ಆಗಿದೆ.

೫೬

ಧರ್ಮ, ಅಧರ್ಮ. ಆಕಾಶ, ಪುದ್ಗಲ ಈ ದ್ರವ್ಯಗಳು ಅಜೀವವಿದ್ದರೂ ಇವಕ್ಕೆ ಕಾಯಗಳಿವೆ. ಇವುಗಳಲ್ಲಿ ಪುದ್ಗಲವು ಮಾತ್ರ.

